# ಅಕ್ಷರಮಾಲೆ-೧

ಹರಿದಾಸ ಮುನ್ನೂರು



ಮಾ ಪ್ರಿಂಟ್-ಪಬ್ಲಿಷರ್ಸ್
ಬೆಂಗಳೂರು

# ಅಕ್ಷಮಾಲೆ - ೧




ಲೇಖಕ

**ಹರಿದಾಸ ಮುನ್ನೂರು**

ಬೆಂಗಳೂರು



**ಪ್ರಕಾಶಕರು**

ಮಾ ಪ್ರಿಂಟ್ - ಪಬ್ಲಿಷರ್ಸ್, ೩, 5ನೇ ಮುಖ್ಯ ರಸ್ತೆ

ಸಂಪಿಗೆ ಲೇಔಟ್, ಪಟ್ಟೆಗಾರ ಪಾಳ್ಯ, ಬೆಂಗಳೂರು - 560 079

# ಅಕ್ಷ ಮಾಲೆ - ೧


ಪುಟಗಳು : 52+viii+4

ಪ್ರತಿಗಳು : 1000

ಬೆಲೆ : ರೂ. 25.00

ಗ್ರಂಥಸ್ವಾಮ್ಯ : ಲೇಖಕ - ಹರಿದಾಸ ಮುನ್ನೂರು

ಪ್ರಕಾಶಕರು : ಮಾ ಪ್ರಿಂಟ್ - ಪಬ್ಲಿಷರ್ಸ್
2, 5ನೇ ಮುಖ್ಯ ರಸ್ತೆ
ಸಂಪಿಗೆ ಲೇಔಟ್, ಪಟ್ಟೆಗಾರ ಪಾಳ್ಯ
ಬೆಂಗಳೂರು - 560 079

ಮುಖಪುಟ ಚಿತ್ರ : ಶ್ರೀ ಬಿ. ಕೆ. ಎಸ್. ವರ್ಮ

ಅಕ್ಷರ ಜೋಡಣೆ : ಶ್ರೀಸಾಫ್ಟ್ ಸರ್ವೀಸಸ್
ದೂರವಾಣಿ : 669 5393 / 661 5249

ಮುದ್ರಣ : ಮಾ ಪ್ರಿಂಟ್ - ಪಬ್ಲಿಷರ್ಸ್
2, 5ನೇ ಮುಖ್ಯ ರಸ್ತೆ
ಸಂಪಿಗೆ ಲೇಔಟ್, ಪಟ್ಟೆಗಾರ ಪಾಳ್ಯ
ಬೆಂಗಳೂರು - 560 079
ದೂರವಾಣಿ : 328 6128

# ಅರಿಕೆ - ಅರ್ಪಣೆ

ಭಾರತೀಯ ಸಂಸ್ಕೃತಿಯಲ್ಲಿ ಪ್ರತಿಮಾ ಪೂಜೆಗೆ ಪ್ರಮುಖ ಸ್ಥಾನವಿದೆ ಮಾಹಾತ್ಮ್ಯ ಜ್ಞಾನ, ಭಕ್ತಿಗಳಿಂದ ಕೂಡಿದ ಸಮರ್ಪಣಾ ಭಾವವೇ ಪೂಜಾಕಾರ್ಯದ ಮೂಲಾಧಾರ ಪೂಜ್ಯಭಾವನೆಯಿಂದ ತನ್ನ ಇಷ್ಟದೈವದೊಡನೆ ತಾದಾತ್ಮ್ಯ ಹೊಂದಿ, ತನ್ಮಯತೆಯಿಂದ ಆರಾಧಿಸಿ, ಉಪಚರಿಸಿ, ಸಮರ್ಪಣಾಭಾವದಿಂದ ಧನ್ಯತೆಯನ್ನು ಪಡೆದು ಇಷ್ಟಾರ್ಥವನ್ನು ಪಡೆಯುವ ಪ್ರಕ್ರಿಯೆಯೇ ಪೂಜೆ ಇದು ಮಾನವ ಜೀವನದ ಅವಿಭಾಜ್ಯ ಅಂಗ

ಮನೋಬುದ್ಧಿ ಚಿತ್ತಗಳಿಗೆ ದಿವ್ಯಾನಂದಾನುಭವಗಳನ್ನು ನೀಡಬೇಕಾದ ಪೂಜೆಯು ಇಂದು ಶುಷ್ಕ ಸಾಂಪ್ರದಾಯಿಕತೆ, ಬಾಹ್ಯ ಆಡಂಬರ, ಅಲಂಕಾರ ಪ್ರದರ್ಶನಗಳಲ್ಲಿ ಪೈಪೋಟಿ, ವ್ಯಾಪಾರೀ ಮನೋಭಾವಗಳಿಂದ, ತತ್ವರಹಿತ ಅನುಷ್ಠಾನವಾಗಿ ಪರಿಣಮಿಸಿದೆ ಇದರಿಂದಾಗಿ ಅವಗಣನೆ, ಅಪಹಾಸ್ಯಗಳಿಗೆ ಗುರಿಯಾಗಬೇಕಾಗಿರುವ ಶೋಚನೀಯ ಪರಿಸ್ಥಿತಿ ಉಂಟಾಗಿದೆ

ಈ ಪರಿಸ್ಥಿತಿಯ ಬಗ್ಗೆ ಸತತ ಚಿಂತನ ಮಂಥನ, ಪರಿಹಾರೋಪಾಯಗಳ ಬಗ್ಗೆ ವಿಚಾರ ವಿನಿಮಯ, ದೇವತಾ ಮೂರ್ತಿಗಳ ಸಾಂಕೇತಿಕ ಮಹತ್ವದ ಬಗ್ಗೆ ವೈಚಾರಿಕತೆ ಇವುಗಳ ಫಲಿತಾಂಶವೇ ಅಕ್ಷ ಮಾಲೆಯಲ್ಲಿ ಕೋದಿರುವ ವೈಚಾರಿಕ ಕಲ್ಪನಾ ಕುಸುಮಗಳು

ನಮ್ಮ ರಾಷ್ಟ್ರಧ್ವಜದ ಬಣ್ಣ-ಚಕ್ರ ಮೊದಲಾದವುಗಳ ಸಾಂಕೇತಿಕ ಮಹತ್ವ ತಿಳಿಯುವುದರಿಂದ ಅದಕ್ಕೆ ನೀಡುವ ಗೌರವವು ಹೆಚ್ಚಾಗಿ ರಾಷ್ಟ್ರಭಕ್ತಿಹೆಚ್ಚುವಂತೆ ಪೂಜಿಸುವ ಮೂರ್ತಿಗಳ ಸಾಂಕೇತಿಕ ಮಹತ್ವ ತಿಳಿದಾಗ ಪೂಜಕನಲ್ಲಿ ಭಕ್ತಿ, ಶ್ರದ್ಧೆ, ಅಂತರ್ಮುಖೀ ಆರಾಧನಾ ಮನೋಭಾವ, ಕರ್ಮಫಲ ಸಮರ್ಪಣಾ ಭಾವಗಳು ಹೆಚ್ಚಾಗುವುದೆಂದು ಆಶಿಸಲಾಗಿದೆ ಪೂಜೆಯ ನಿಜವಾದ ಉದ್ದೇಶಗಳ ಅರಿವುಂಟಾಗಿ ಆಸ್ತಿಕರಲ್ಲಿ ದೈವ ಭಕ್ತಿ ಹೆಚ್ಚಿ ಮಾನಸಿಕ ಶಾಂತಿ, ನೆಮ್ಮದಿ, ಆನಂದಾನುಭವಗಳು ಹೆಚ್ಚಾಗುವುದೆಂದು ಬಲವಾದ ನಂಬಿಕೆ

ಪ್ರಮುಖವಾಗಿ ಪೂಜಿಸಲ್ಪಡುವ ಮೂಲದೇವತೆಗಳಾದ ವಿಷ್ಣು, ಶಿವ, ಗಣೇಶ ಇತ್ಯಾದಿ ದೇವತಾ ಪ್ರತಿಮೆಗಳು ದೀಪಜ್ಯೋತಿ ಪೂಜಾಕಲಶ ಅರ್ಥಪೂರ್ಣವಾದ ಅಭಿಷೇಕ ಕ್ರಿಯೆ, ಪ್ರತಿಯೊಬ್ಬರೂ ಎದುರಿಸಲೇ ಬೇಕಾದ ಬದಲಾವಣೆಯ ಪ್ರತೀಕವಾಗಿ ಸಂಧ್ಯಾದೇವಿ, ಸಮಗ್ರ ವಿಶ್ವ ವ್ಯವಸ್ಥೆಯನ್ನು ಪ್ರತಿಬಿಂಬಿಸುವ ನವಗ್ರಹಗಳು ಮೊದಲಾದ ವಿಚಾರಗಳ ಬಗ್ಗೆ ಹದಿನಾರು ಲೇಖನಗಳಿವೆ ಮಾನವರೂಪೀ ಆರಾಧ್ಯದೇವತೆಗಳಾದ ರಾಮಕೃಷ್ಣ ಮೊದಲಾದ ಪ್ರತಿಮೆಗಳಲ್ಲಿ ಸಾಂಕೇತಿಕ ಪರಿಕಲ್ಪನೆಯ ಅಂಶ ಅಧಿಕವಾಗಿರದೆ, ಮಹತ್ವವು ಶಾಸ್ತ್ರಪುರಾಣಗಳಲ್ಲಿ ಧಾರಾಳವಾಗಿ ಲಭ್ಯವಾಗಿರುವ ಕಾರಣ ಅವುಗಳ ಬಗ್ಗೆ ಲೇಖನಗಳಿಗೆ ಹೆಚ್ಚಿಗೆ ಗಮನ ಹರಿಸಿಲ್ಲ

ಈ ಲೇಖನಗಳ ರಚನೆಗೆ ಸ್ಫೂರ್ತಿದಾತರಾದ ಪತ್ರಕರ್ತ ಶರತ್ ಕುಮಾರ್ ಹಾಗೂ ಇಷುಧಿ ಪತ್ರಿಕೆಯ ಸಂಪಾದಕಿ ಶ್ರೀಮತಿ. ವೀಣಾ ಎಸ್. ಭಟ್ ಇವರು ಲೇಖನಗಳನ್ನು ಇಷುಧಿಯಲ್ಲಿ 'ಪ್ರತಿಮಾವರಣ' ಎಂಬ ಅಂಕಣದಲ್ಲಿ ಪ್ರಕಟಿಸಿರುವುದಲ್ಲದೆ, ಇದೀಗ ಪುಸ್ತಕ ರೂಪದಲ್ಲಿ ಹೊರತರುವುದಕ್ಕೂ ಬಹಳ ಶ್ರಮಿಸಿದ್ದಾರೆ. ಇವರಿಗೆ ಕೃತಜ್ಞತೆಗಳು.

ಪ್ರಖ್ಯಾತ ಚಿತ್ರಕಲಾವಿದ ಕುಂಚಬ್ರಹ್ಮ ಶ್ರೀ. ಬಿ.ಕೆ.ಎಸ್.ವರ್ಮರವರು ತಮ್ಮ ಸುಂದರ ಕಲಾಕೃತಿಯನ್ನು ಮುದ್ರಿಸಲು ಒಪ್ಪಿಗೆ ನೀಡುವ ಮೂಲಕ ಪುಸ್ತಕದ ಸೊಬಗನ್ನು ಹೆಚ್ಚಿಸಲು ನೆರವಾಗಿದ್ದಾರೆ. ಇವರಿಗೆ ಗೌರವಪೂರ್ಣ ವಂದನೆಗಳು.

ಶ್ರೇಷ್ಠ ವಿದ್ವಾಂಸರಾದ ಶ್ರೀ ಅದ್ಯಪ್ಪಾಡಿ ಹರಿದಾಸ ಭಟ್ಟರವರು ತಮ್ಮ ಪ್ರಭಾವಪೂರ್ಣ ಮುನ್ನುಡಿಯಿಂದ ಲೇಖಕನ ಉದ್ದೇಶವನ್ನು ಈಡೇರಿಸಲು ಕಾರಣರಾಗಿದ್ದಾರೆ. ಇವರಿಗೆ ನವಿನಯ ಅಭಿವಂದನೆ. ಗಣಕೀಕೃತ ಲಿಪಿ ಸಂಯೋಜನೆ ಮಾಡಿದ ಶ್ರೀನಾಥ್ಸ್ ಶ್ರೀ ಶ್ರೀಪತಿಯವರಿಗೆ ಹಾಗೂ ಪುಸ್ತಕದ ಮುದ್ರಣ ಮತ್ತು ಪ್ರಕಾಶನದ ಜವಾಬ್ದಾರಿಯನ್ನು ವಹಿಸಿರುವ ಮಾ ಪ್ರಿಂಟ್ಸ್ - ಪಬ್ಲಿಷರ್ ಸಂಸ್ಥೆಯ ಮಾಲಕರು ಹಾಗೂ ಪ್ರಿಯ ಸ್ನೇಹಿತರಾದ ಸುನೀತಾ - ಸುರೇಂದ್ರರವರಿಗೆ ಸಪ್ರೇಮ ಕೃತಜ್ಞತೆಗಳು.

ಪೂಜೆ ಬಗ್ಗೆ ಆಸಕ್ತಿ, ಜಿಜ್ಞಾಸೆ, ಶ್ರದ್ಧೆ, ಭಕ್ತಿಗಳಿಗೆ ಮೂಲಕಾರಣರು ನಮ್ಮ ತೀರ್ಥರೂಪರಾದ ಶ್ರೀ. ಕೃಷ್ಣಸಣ್ಣಕ್ಕತ್ತಾಯರು - ತಮ್ಮ ಜೀವನ ಪರ್ಯಂತ ಅರ್ಚಕರಾಗಿ, ಸಂಸ್ಕೃತ ವಿದ್ವಾಂಸರಾಗಿ, ಪ್ರಾಮಾಣಿಕರಾಗಿ ವೃತ್ತಿಗೌರವವನ್ನು ಕಾಪಾಡಿ, ಅಪಾರ ಜನಮನ್ನಣೆಯನ್ನು ಪಡೆದಿದ್ದು ಆಸ್ತಿಕರಿಗೆ ಸ್ಫೂರ್ತಿದಾತರಾಗಿದ್ದರು. ಪೂಜಾಕೈಂಕರ್ಯದಲ್ಲಿ ಅಸೀಮ ಶ್ರದ್ಧೆ , ಸಹನೆ, ಹಾಗೂ ದಾನಧರ್ಮಗಳಿಂದ ಜನಪ್ರಿಯರಾದ ಮಾತೋಶ್ರೀ ಯವರಾದ ಕಲ್ಯಾಣಿ ಅಮ್ಮನವರು. ಮಮತಾಮಯಿ ಮಾತಾಮಹಿ ಲಕ್ಷ್ಮಿ ಅಮ್ಮನವರು ತಮ್ಮ ಪ್ರೀತಿಯನ್ನು ಧಾರೆಯೆರೆದು ನಿರ್ವ್ಯಾಜ ಪ್ರೇಮದಿಂದ ಮಕ್ಕಳನ್ನು ಸಾಕಿ ಸಲಹಿ ಸಾಂಸಾರಿಕ ಪೂಜಾ ವಿಧಾನದಿಂದ ದೇವರನ್ನು ಪ್ರೀತಿಪಡಿಸಿದವರು. ಮುಗ್ಧಮನಸ್ಸಿನ ಹೃದಯ ಸಂಸ್ಕಾರವನ್ನು ಹೊಂದಿ ಎಳೆ ಮನಸ್ಸಿನ ಮೇಲೆ ಅತೀವ ಪ್ರಭಾವ ಬೀರಿದವರು.

ಪೂಜ್ಯರಾದ ಈ ಮೂವರು ಹಿರಿಯ ಬಂಧುಗಳಿಗೆ ಈ ಅಕ್ಷಮಾಲೆಯನ್ನು ಅಕ್ಕರೆಯಿಂದ ಅರ್ಪಿಸುತ್ತಿದ್ದೇನೆ.

**ಹರಿದಾಸ ಮುನ್ನೂರು**

ಮುನ್ನುಡಿ

# ಪ್ರತಿಮಾ - ಅನಾವರಣ

**ಪ್ರತಿಮಾಸು ಅಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್॥**

ತಿಳಿದವರು ಎಲ್ಲೆಡೆ ದೇವರನ್ನು ಕಂಡರೆ ಸಾಮಾನ್ಯರು ಪ್ರತಿಮೆಗಳಲ್ಲಿ ದೈವೀಪ್ರಜ್ಞೆಯನ್ನು ಸೀಮಿತಗೊಳಿಸುತ್ತಾರೆ. ಎಲ್ಲೆಡೆ ಹರಿಯುವ ವಿದ್ಯುತ್ತನ್ನು ಪ್ರಕಾಶರೂಪದಿಂದ ಹೊರಹೊಮ್ಮಿಸುವ ಮಾಧ್ಯಮಗಳು 'ದೀಪದ ಬಲ್ಬುಗಳು'. ಅದರಂತೆ, ಸಾಮಾನ್ಯರ ದೃಷ್ಟಿಯಲ್ಲಿ ಇಂದ್ರಿಯಾತೀತ ದೇವದೇವನ ಅಭಿವ್ಯಕ್ತಿಯ ಮಾಧ್ಯಮ ಪ್ರತಿಮೆಗಳು.

ನಮ್ಮ ಮನಬಂದಂತೆ ಪ್ರತಿಮೆಗಳನ್ನು ಕೆತ್ತಿ, ಪೂಜಿಸಲು ತಂತ್ರಶಾಸ್ತ್ರಗಳು ಅನುಮತಿಯನ್ನು ಕೊಟ್ಟಿಲ್ಲ. ಪ್ರತಿಮೆಗಳ ಕಾಲಿನ ಉಗುರಿನಿಂದ ಹಿಡಿದು ತಲೆಯ ಕೂದಲಿನವರೆಗೆ ನಿಖರವಾದ ಅಳತೆ, ಆಯುಧಗಳ ವಿನ್ಯಾಸವನ್ನು ತಂತ್ರಶಾಸ್ತ್ರಗಳಲ್ಲಿ ಹೇಳಲಾಗಿದೆ. ಇದರಲ್ಲಿ ವ್ಯತ್ಯಾಸವಾದರೆ, ಭಿನ್ನ ಬಂದರೆ, ಪ್ರತಿಮೆಯಲ್ಲಿ ದೇವರ ಸಾನ್ನಿಧ್ಯ ಹ್ರಾಸವಾಗುತ್ತದೆ.

ಇಂದು ಜೀವನದ ಸಂಘರ್ಷದಲ್ಲಿ ದೇವತಾಪ್ರಜ್ಞೆ, ಭಯದಿಂದಾಗಿ, ಅಲ್ಪಸ್ವಲ್ಪ ಉಳಿದುಕೊಂಡಿದೆ. ಅಲ್ಲದೆ ದೇವರ ಮೈತುಂಬ ನಮ್ಮ ವೈಭವಪ್ರದರ್ಶನಕ್ಕಾಗಿ ಆಭರಣ ತೊಡಿಸಲಾಗುತ್ತದೆ. ಹೀಗಾಗಿ ಅರೆಗಳಿಗೆ ದೇವಾಲಯಕ್ಕೆ ಹೋಗಲು ಪುರುಸೊತ್ತು ಸಿಕ್ಕರೂ ಪ್ರತಿಮೆಯ ಅಂಗಾಂಗಗಳನ್ನು ವೀಕ್ಷಿಸುವ ವ್ಯವಧಾನವೇ ಅಪರೂಪವಾಗಿದೆ. ಲೇಖಕರಾದ ಶ್ರೀ ಹರಿದಾಸರವರು ಅಕ್ಷಮಾಲೆ ಲೇಖನ ಸಂಚಯದ ಮೂಲಕ ಪ್ರತಿಮೆಗಳಿಗೆ ಮುಚ್ಚಿದ ಈ ಆವರಣವನ್ನು ಸರಿಸಿದ್ದಾರೆ. ಈ ಅರ್ಥದಲ್ಲಿ ಇದು ಪ್ರತಿಮಾನಾವರಣ.

ಈ ಕೃತಿಯಲ್ಲಿ ಪ್ರತಿಮೆಗಳ ಆಯುಧ, ಅಂಗಾಂಗಗಳ ವಿನ್ಯಾಸವನ್ನು ಆಧುನಿಕ ಪ್ರಜ್ಞೆಯೊಂದಿಗೆ ಮೇಳೈಸಲಾಗಿದೆ. ಗಣಪತಿಯ ಚಂದ್ರಭೂಷಣ - ತಲೆ ಬಿಸಿಯ ಪರಿಹಾರವಾಗಿ ಕಂಡರೆ 'ಪದ್ಮನಾಭನ' ನಾಭಿಕಮಲ ಅದರಲ್ಲಿ ರಾರಾಜಿಸುವ ನಾಲ್ಮೊಗದ ಬೊಮ್ಮ, ಅವನ ವಾಹನ, ಸುತ್ತಮುತ್ತಲಿನ ಪರಿವಾರ ಆಧುನಿಕ ಜಗತ್ತಿನ ಆಡಳಿತ ವ್ಯವಸ್ಥೆಯ ಸಂಕೇತವಾಗಿ ಚಿತ್ರಿತವಾಗಿದೆ. ಲೇಖಕರ ಪ್ರತಿಭಾನ್ವಿತವಾದ ಈ ಕಲ್ಪನೆಯಿಂದ ದೇವತಾ ಸಂದರ್ಶನ ಮಾಡಿದಾಗ ಹೊಸ ಸ್ಫೂರ್ತಿಯನ್ನು, ಸಂದೇಶವನ್ನು, ಪ್ರತಿಮೆಗಳು ನೀಡಬಲ್ಲವು. ಲಯಕಾರಕನಾದ ರುದ್ರದೇವನ ಪ್ರತೀಕವಾದ ಶಿವಲಿಂಗ ಮರುಸೃಷ್ಟಿಯ ಸಂಕೇತವೆಂಬ

ಅರ್ಥವಂತಿಕೆ ಮೆಚ್ಚತಕ್ಕದ್ದು. ವಿಷ್ಣು ಧರಿಸಿದ ಪಾಂಚಜನ್ಯ 'ಪಂಚಜನ' ಶಬ್ದದಿಂದ ಉಂಟಾದರೂಪ. ಹೀಗಾಗಿ ಪಂಚಭೂತಗಳ ಹಿನ್ನೆಲೆಯನ್ನು ಲೇಖಕರು ಕಂಡಿದ್ದು ವಿಚಾರಾರ್ಹ.

ಒಟ್ಟಿನಲ್ಲಿ ಹೊಸ ಶೈಲಿಯ ಕೃತಿ ಉಪಯುಕ್ತವಾಗಿದೆ. ಇದು ಓದುಗರಿಗೆ ಹೊಸ ಸ್ಫೂರ್ತಿಯನ್ನು ನೀಡಲಿ ಎಂದು ಆಶಿಸುತ್ತೇನೆ.

**– ವಿದ್ವಾನ್ ಎ. ಹರಿದಾಸ್ ಭಟ್**

# ಅಕ್ಷರ ಮಾಲೆ - ೧

## ದೇವತಾ ಮೂರ್ತಿಗಳ ಸಾಂಕೇತಿಕ ಮಹತ್ವ

# ಪ್ರಾರ್ಥನೆ

ಶಕ್ತಿಯ ಕೊಡು ಬೆಳಕೇ । ಮಾಯೆಯ
ಮಬ್ಬು ಹಿಡಿದ ಜಗಕೆ ।
ಸತ್ಯ ಪ್ರಕಾಶಕೆ ಸತತವು ಕಾಯುವ
ಸಜ್ಜನ ಸಂಕುಲಕೆ ॥೧॥

ಬೆಡಗಿನ ನಟನೆಯಲಿ । ಜಗದೊಳು
ಸಹಜತೆ ಮಾಸುತಿದೆ
ಸರಳತೆ ಸೊಬಗನು ಸತತವು ಸವಿಯಲು
ಸನ್ಮತಿ ಕೊಡು ಬೆಳಕೇ ॥೨॥

ಮೋಸ, ಕಪಟ ತುಂಬಿ । ಸದಸತ್
ವಸ್ತುವನಾನರಿಯೆ ।
ಹಿತಾಹಿತವನು ಅರಿಯುವ ತೆರದಲಿ
ವಿವೇಕ ಕೊಡು ಬೆಳಕೇ ॥೩॥

ಶತ್ರುವು ಮುತ್ತಿಹನು । ಚಿತ್ತದ
ಚೋರನು ಕಾಡುವನು ।
ಸ್ವಾರ್ಥಪಿಶಾಚಿಯ ಪೀಡೆಯು ಹೆಚ್ಚಿದೆ
ಸಂಯಮ ಕೊಡು ಬೆಳಕೇ ॥೪॥

ಭ್ರಾಂತಿಗೆ ಬಲಿಯಾಗಿ । ಸ್ವಧರ್ಮಾದಿ
ಶ್ರದ್ಧೆಯು ನಶಿಸುತಿದೆ
ಸಭ್ಯತೆ ಸಂಸ್ಕೃತಿ ಹಾಳಾಗುತಲಿದೆ
ಚೇತನ ಕೊಡು ಬೆಳಕೇ ॥೫॥

ಸತ್ಯವ ನರಿಯುವ ಶಕ್ತಿಯ ನೀಡಿ
ಶಿವನನು ತೋರೆಮಗೆ
ಸುಂದರ ದೃಶ್ಯವ ತೋರಿಸಿ ಮನಸಿಗೆ
ಶಾಂತಿಯ ಕೊಡು ಬೆಳಕೇ ॥೬॥



# ಕಾರ್ಯಸಚೇತಕ ಗಣಪತಿ

**ಯಾ**ವುದೇ ಐಹಿಕಕಾಮ್ಯ ಕಾರ್ಯಗಳಾದ ವ್ರತ, ಯಾಗ, ಯಜ್ಞ, ಆರಾಧನೆ ಹಾಗೂ ಧಾರ್ಮಿಕ ಸಂಸ್ಕಾರಗಳ ಪ್ರಾರಂಭದಲ್ಲಿ ಗುರು ಗಣಪತಿ ಪೂಜೆ ಮಾಡಲೇಬೇಕೆಂಬ ವಿಧಿಯಿದೆ ಇಷ್ಟಾರ್ಥ ಸಿದ್ಧಿಯ ಸನ್ಮಾರ್ಗವನ್ನು ತೋರಿಸುವವನು ಸದ್ಗುರುವಾದರೆ ಸರ್ವವಿಘ್ನಗಳ ಪರಿಹಾರಕ ಗಣಪತಿಯೆಂಬುದು ಶಾಸ್ತ್ರೋಕ್ತ ವಿಚಾರ ಗಣಪತಿಯು ವಿಘ್ನವನ್ನು ನಿವಾರಿಸಬೇಕಾದರೆ ಪೂಜಕನು ಗಣಪತಿಯ ಸ್ವರೂಪವನ್ನು ಧ್ಯಾನಿಸಿ ಧ್ಯಾನಸ್ವರೂಪಿಯಾದ ಗಣಪತಿಯ ವರ್ಣ, ಆಕಾರ, ವಾಹನ, ಆಯುಧ ಮೊದಲಾದವುಗಳ ಮಹತ್ವವನ್ನರಿಯುವುದು ಅತಿ ಅಗತ್ಯ. ಗಣಪತಿಯ ಒಂದು ಧ್ಯಾನ ಹೀಗಿದೆ.

**ರಕ್ತೋ ರಕ್ತಾಂಗ ರಾಗಾಂಶುಕ ಕುಸುಮ ಯುತಃ ತುಂದಿಲಃ ಚಂದ್ರಮೌಳಿಃ ನೇತ್ರೈರ್ಯುಕ್ತೈಸ್ತ್ರಿಭಿಃ ವಾಮನ ಕರಚರಣೋ ಬೀಜ ಪೂರಾತ್ತನಾಸಃ ಹಸ್ತಾಗ್ರೇ ಕ್ಲಪ್ತ ಪಾಶಾಂಕುಶ ರದ ವರದೋ ನಾಗ ವಕ್ತ್ರೋSಹಿ ಭೂಷೋ ದೇವಃ ಪದ್ಮಾಸನೋ ನೋ ಭವತು ನತಸುರೋ ಭೂತಯೇ ವಿಘ್ನರಾಜಃ** 'ರಕ್ತೋರಕ್ತಾಂಗರಾಗ' ಕೆಂಪುಬಣ್ಣ ತಡೆಸೂಚನೆ. ಮುಂಬರುವ ಅಪಾಯವನ್ನು ಮನಗಾಣಲು ಮತ್ತು ಪ್ರಚಲಿತ ವಿದ್ಯಮಾನವನ್ನು ವೀಕ್ಷಿಸುವುದಕ್ಕಾಗಿ. **ತುಂದಿಲ:** ಸ್ವತಹ ಭಾಗಿಯಗದೆ, ಸೊಂಡಿಲ ಮೂಲಕ ವಾಸ್ತವಿಕೆಯನ್ನು ಅರಿಯುವ ವಿಚಕ್ಷಣತೆ **ಚಂದ್ರಮೌಳಿ** : ತಲೆಬಿಸಿ ಮಾಡಿಕೊಳ್ಳದೆ ಸದಾ ತಲೆಯನ್ನು ತಂಪಾಗಿ ಇಟ್ಟುಕೊಳ್ಳುವ ಶೀತಲ ಮನೋಭಾವ. ತಂಪೇ ಸಹನೆ -ಸ್ಥೈರ್ಯಗಳಿಗೆ ಮೂಲ **ತ್ರಿಭಿನೇತ್ರೈರ್ಯುಕ್ತ** : ಬಾಹ್ಯದೃಶ್ಯಕ್ಕಾಗಿ ಎರಡು ಕಣ್ಣುಗಳು ಅಂತರ್ವೀಕ್ಷಣೆ ಹಾಗೂ ಅಂತರ್ಗತದ ಅರಿವಿಗಾಗಿ ಪ್ರಜ್ಞೆಯೆಂಬ ಮೂರನೆಯ ಕಣ್ಣು. **ವಾಮನ ಕರಚರಣ** ನಮ್ಮ ಕೆಲಸ ಸಾಧಿಸಬೇಕಾದರೆ ತಗ್ಗಿ ಬಗ್ಗಿ ವಿನಯದಿಂದ ವಾಮನನಾಗಬೇಕು ಏರಿದವನು ಬಲು ಚಿಕ್ಕವನಿರಬೇಕು ಎನ್ನುವ ಸಂದೇಶವನ್ನು ಸಾರುವುದಕ್ಕಾಗಿ **ಬೀಜ ಪೂರಾತ್ತನಾಸ**. ಜಗತ್ತೆಂಬುದು ಫಲ ಭರಿತ ಕ್ಷೇತ್ರ, ಬೀಜದಿಂದ ತುಂಬಿರುವ ಫಲವು ನಾಸಿಕಾಗ್ರದಲ್ಲಿದ್ದು 'ಫಲ'ದ ಆಸ್ವಾದನೆಗೆ ಮಾತ್ರ ಗಮನವನ್ನು ಸೀಮಿತಗೊಳಿಸದೆ ಈ ಸಫಲತೆಯ ಹಿಂದಿರುವ ಪ್ರಕೃತಿ, ಪ್ರಯತ್ನ, ಕಾಲನ ಕೈವಾಡ, ಪರಿಪಕ್ವತೆಗಳ ಬಗ್ಗೆ ಯೋಚಿಸುವುದೇ ಇದರ ಅಂತರ್ಗತ ಸಾಂಕೇತಿಕ ವಿಚಾರ

**ಹಸ್ತಾಗ್ರೇಕ್ಲಪ್ತ ಪಾಶ, ಅಂಕುಶ, ರದ, ವರದ** : ಪಾಶವು ಹಲವು ದಿಕ್ಕಿನಲ್ಲಿ ಮತ್ತು ವಿಚಾರದಲ್ಲಿ ಹರಿದಾಡಿ ಏಕಾಗ್ರತೆಯನ್ನು ಭಂಗಪಡಿಸುವ ಮನವನ್ನು ಹಾಗೂ ಇಂದ್ರಿಯಗಳನ್ನು ಬಂಧಿಸಿ ನಿರ್ದಿಷ್ಟ ಗುರಿಯತ್ತ ಹರಿಸುವ ಅಗತ್ಯದ ಸಂದೇಶ **ರದ:** ಕಾರ್ಯವನ್ನು ಸಾಧಿಸಬೇಕಾದರೆ ನಮ್ಮ ಸೊಕ್ಕಿನ ಸಂಕೇತವಾದ ಹಲ್ಲನ್ನು ಮುರಿದು ತನ್ನ ಕೈಯಲ್ಲಿ ಹಿಡಿದುಕೊಂಡಿರಬೇಕಾದ ಅಗತ್ಯವನ್ನು ಸಾರುವ ಸಂಕೇತ. **ಅಂಕುಶ:** ಮನುಷ್ಯನಿಗೆ ದೈವದತ್ತವಾದ ವಿಶಿಷ್ಟ ಕೊಡುಗೆಯಾದ ಬುದ್ಧಿ, ವಿವೇಕಗಳನ್ನು ವಶವರ್ತಿಮಾಡ ಬೇಕಾದರೆ ಆನೆಗೆ ಅಂಕುಶವಿದ್ದಂತೆ ಪ್ರಬಲ ಬುದ್ಧಿಗೆ ಹಿಡಿತ ಬೇಕು. ನಿರ್ದಿಷ್ಟ ಗುರಿ ಸಾಧನೆಗಾಗಿ ಬುದ್ಧಿ ಮತ್ತೆ ಮತ್ತು ಬಲವನ್ನು ಉಪಯೋಗಿಸಬೇಕಾದ ಅವಶ್ಯಕತೆಯ ಸಂದೇಶ **ವರದ**· ಗಣಪತಿಯು ನೀಡುವ ಸಂಕೇತಗಳನ್ನು ಗ್ರಹಿಸಿ ಪಾಲಿಸಿದ್ದೇ ಆದರೆ ಯಶಸ್ಸನ್ನು ಪಡೆಯುವ ಸಂಕೇತ ವರದಾಯಕ ಮುದ್ರೆ, ವರದ. **ನಾಗವಕ್ತ್ರ** (ಆನೆಯತಲೆ) : ವಿಶಾಲವಾದ ಕಿವಿಯಿಂದ ನಾನಾ ಕಡೆಗಳಿಂದ ·ಬರುವ ಗೂಢ ಸಮಾಚಾರ ಮತ್ತು ಸಂದೇಶಗಳನ್ನು ಆಲಿಸುವುದು. ಸೂಕ್ಷ್ಮವಾದ ಕಣ್ಣುಗಳಿಂದ ವಸ್ತುವಿನ ನಿಗೂಢತೆಯನ್ನರಿಯುವುದು, ವಿಷಯದ ವಾಸನೆಯನ್ನರಿಯಲು ದೀರ್ಘನಾಸಿಕ **ಅಹಿಭೂಷ** : ಜಗತ್ತು ಹಾನಿಕಾರಕ ಹಾಗೂ ಹಾನಿರಹಿತ ಜಂತುಗಳಿಂದ ತುಂಬಿ ಅವುಗಳಿಂದ ಉಪಯೋಗವೂ ಇದೆ. ಭೂಷಣವಾದ ಹಾವು ವಾಹನವಾದ ಇಲಿಗೆ ವೈರಿಯಾದರೂ ಉಪಾಯವಾಗಿ ಇವೆರಡನ್ನೂ ಅಳವಡಿಸಿಕೊಂಡು ಕಾರ್ಯಸಾಧಿಸುವುದು ಜಾಣ್ಮೆ. **ಮೂಷಿಕ ವಾಹನ** : ದೊಡ್ಡ ಶರೀರಕ್ಕೆ ಚಿಕ್ಕ ಇಲಿ ವಾಹನ ವಿಚಿತ್ರ. ಆದರೂ ಅರ್ಥ ಪೂರ್ಣ. ಬಿಲದಲ್ಲಿ ಅವಿತಿರುವ ರಹಸ್ಯಗಳ ಅರಿವಿಗಾಗಿ ಈ ಚುರುಕು ಬುದ್ಧಿಯ, ತೀವ್ರ ಚಲನೆಯ ಇಲಿಯ ಮಹತ್ವವನ್ನು ಮನಗಾಣಬೇಕು. **ಲಂಬೋದರ** : ಉದಾರತೆಯ ಪ್ರತೀಕ ದೊಡ್ಡ ಹೊಟ್ಟೆ, ಹೊಟ್ಟೆಯೊಳಗೆ ಹಾಕಿಕೊಂಡು ಕ್ಷಮಿಸುವಂತೆ ದುರ್ಬಲರ ಪ್ರಾರ್ಥನೆ, ಎಲ್ಲವನ್ನೂ ನುಂಗಿ (ಸಹಿಸಿಕೊಂಡು) ದೊಡ್ಡದಾದ ಹೊಟ್ಟೆಯುಳ್ಳ ಗಣಪ ಕ್ಷಮಾಮೂರ್ತಿ, ವಿನೋದ ಪ್ರಿಯ.

ಈ ರೀತಿಯಾಗಿ ಗಣಪತಿಯ ಮೈ ಬಣ್ಣ ,ಆಕಾರ, ಅಂಗಾಂಗಗಳು, ಆಯುಧ, ವಾಹನ, ಭೂಷಣವೆಲ್ಲವೂ ಸಾಧಕನ ಯಶಸ್ಸಿಗೆ ನೀಡುವ ಅರ್ಥಪೂರ್ಣ ಸಂಕೇತಗಳು.

ಎಷ್ಟೋ ಸುಂದರ ಸ್ವರೂಪದ ದೇವತಾ ಮೂರ್ತಿಗಳನ್ನು ಕಲ್ಪಿಸಿರುವ ದಿವ್ಯದ್ರಷ್ಟಾರರಿಗೆ ಈ ವಿಚಿತ್ರ ರೂಪದ ಗಣಪತಿಯ ಕಲ್ಪನೆಯೂ ಅಷ್ಟೇ ಅರ್ಥಪೂರ್ಣ. ಸಾಧಕನ ಸಫಲತೆಗೆ ಮಹತ್ವಪೂರ್ಣ ಮಾರ್ಗದರ್ಶಿ





# ಜ್ಞಾನದಾಯಿನಿ ಸರಸ್ವತೀ

**ಪು**ರಾಣೋಕ್ತ ಸರಸ್ವತೀ ದೇವಿಯು ಸೃಷ್ಟಿಕರ್ತನ ಸಹಧರ್ಮಿಣಿ ವಿದ್ಯಾ ಬುದ್ಧಿ ಪ್ರದಾಯಿನಿ. ಜ್ಞಾನ ಸ್ವರೂಪಿಣಿ. ಪ್ರಕೃತಿಯಲ್ಲಿ ಪರಮಾನಂದ ಪ್ರದರ್ಶಿನಿ. ಹರಿ ಹರ ಬ್ರಹ್ಮ ಸಂಸೇವಿನಿ ಸದಾ ಚೈತನ್ಯ ಶೀಲೆ. ಅಜ್ಞಾನ, ಅಂಧಕಾರ, ಜಾಡ್ಯಗಳನ್ನು ಪರಿಹರಿಸಲು ನಿರಂತರ ಪ್ರವಹಿಸುತ್ತಿರುವ ಸರಸ್ವತಿಯು ಶುಭ್ರವಸ್ತ್ರಾನ್ವಿತೆ, ಶ್ವೇತ ಪದ್ಮಾಸನೆ, ಸೃಷ್ಟಿ ಸೌಂದರ್ಯದ ಉದಾತ್ತ ಉದಾಹರಣೆಯಾದ ಲಾಸ್ಯ ಚತುರ ಮಯೂರ ವಾಹನೆ.

ಒಂದು ಅರ್ಥ ಗರ್ಭಿತ ಧ್ಯಾನ ಶ್ಲೋಕ ಇಂತಿದೆ

**ಶುಕ್ಲಾಂ ಬ್ರಹ್ಮ ವಿಚಾರ ಪರಮಾಂ ಆದ್ಯಾಂ ಜಗದ್ವ್ಯಾಪಿನೀಂ, ವೀಣಾ ಪುಸ್ತಕ ಧಾರಿಣೀಂ ಅಭಯದಾಂ ಜಾಡ್ಯಾಂಧಕಾರಾಪಹಾಂ, ಹಸ್ತೇ ಸ್ಫಾಟಿಕ ಮಾಲಿಕಾಂ ವಿದಧತೀಂ ಪದ್ಮಾಸನೇ ಸಂಸ್ಥಿತಾಂ, ವಂದೇ ತಾಂ ಪರಮೇಶ್ವರೀಂ ಭಗವತೀಂ ಬುದ್ಧಿಪ್ರದಾಂ ಶಾರದಾಂ॥**

ಸರಸ್ವತಿಯು ಶರದೇಂದು ಸಮಾನ ಶುಭ್ರವಾದ ಶುಕ್ಲ ವರ್ಣದಿಂದ ಆರಾಧಕನ ಮನೋಬುದ್ಧಿ ಪ್ರಜ್ಞೆಗಳಿಗೆ ಆಹ್ಲಾದವನ್ನೀಯುವವಳು. ಕಲ್ಮಶರಹಿತಳು ಪರಮ ಶ್ರೇಷ್ಠವಾದ ಬ್ರಹ್ಮ ವಿಚಾರದ ಸಾರ ಭೂತಳು ಸಕಲ ಜಗದ್ವ್ಯಾಪಿನಿ. ಸಚ್ಚಿದಾನಂದ ತತ್ತ್ವವನ್ನು ಪ್ರತಿನಿಧಿಸುವ ಸರಸ್ವತಿಯ ಉಜ್ವಲ ಧವಳ ವರ್ಣವು ಸಾಧಕನಿಗೆ ಆನಂದದಾಯಕ ಅನುಭವ. ಸದ್ವಿದ್ಯೆಯಿಂದ ಪ್ರಕೃತಿಯ ಸೌಂದರ್ಯಾಸ್ವಾದನೆಯ ಸಂಕೇತಗಳು ಪ್ರಫುಲ್ಲ ಶ್ವೇತ ಪದ್ಮ, ವಿಸ್ಮಯಕರ ವರ್ಣರಂಜಿತ ಮಯೂರ, ಸದಾಚಲನಶೀಲವಾದ ಸರಸ್ವತೀ ನದಿ

ಬರಡಾದ ಕೊರಡಲ್ಲಿ ಜೀವ ರಸವನ್ನು ತುಂಬಿ ಮನದ ತಂತಿಯನ್ನು ಮೀಟಿ ಅಮರ ನಾದದಿಂದ ಜಗದಾನಂದಕರ ಸಂಗೀತ ಹೊರಡಿಸುವ ಅದ್ಭುತ ಪ್ರತಿಭೆಯ ಪ್ರತೀಕವೇ ವಿದ್ಯಾಧಿದೇವತೆಯ ಕರಗಳಲ್ಲಿ ಮಂಡಿತವಾಗಿರುವ ವೀಣೆ

ಜ್ಞಾನದ ಅಕ್ಷಯ ನಿಧಿಯ ಸಂಕೇತವೇ ಪುಸ್ತಕ. ಜ್ಞಾನವು ಅಪಾರ, ಅನಂತ, ನಿರಂತರ, ಸದಾ ಪ್ರವರ್ಧಮಾನ. ವಿದ್ಯಾರ್ಜನೆಗೆ ಅಂತ್ಯವೆಂಬುದಿಲ್ಲ ಪುಸ್ತಕವು

ವಿದ್ಯಾರ್ಥಿಯ ಅವಿಚ್ಛಿನ್ನ ಆತ್ಮೀಯ ಬಂಧು. ಆತ್ಮ ವಿಕಾಸದ ಸಾಧನ ಅಗಾಧತೆಗಿಳಿಯುವ ಉಪಕರಣ ಪುಸ್ತಕವನ್ನು ಅರ್ಥಾತ್ ಜ್ಞಾನಾರ್ಜನೆಯನ್ನು ಎಂದಿಗೂ ಕೈಬಿಡ ಬಾರದೆಂಬುದೇ ಪುಸ್ತಕ ಧಾರಣೆಯ ಸಂಕೇತ. ಜ್ಞಾನಿಯು ಭಯ ಪಡಬೇಕಾಗಿಲ್ಲ, ಅವನಿಗೆ ಯಾವುದೇ ರೀತಿಯ ಭಯವೂ ಉಂಟಾಗಲಾರದು ಸರಸ್ವತಿ ಮೂರ್ತಿಯ ಧ್ಯಾನದಿಂದ ನಿರ್ಭಯತ್ವ ಪ್ರಾಪ್ತಿ ಸದಾ ಅಭಯ ಹಸ್ತದರ್ಶನದಿಂದ ಮಾನಸಿಕ ಭೀತಿ ನಿವಾರಣೆ.

ಆಲಸ್ಯ, ಅಜ್ಞಾನಗಳೆಂಬ ತಮೋಗುಣಗಳು ಸಾಧಕನ ಪ್ರಗತಿಗೆ ಮಾರಕ. ಇವುಗಳ ನಿವಾರಣೆ ಸರಸ್ವತಿಯ ಅರುಣ ಕಿರಣ ಜಾಲದಂತಹ ಪ್ರಜ್ವಲ ಪ್ರಭೆಯಿಂದ ಸಾಧ್ಯ.

ಕೈಯಲ್ಲಿ ಅಕ್ಷಮಾಲೆಯೆಂಬ ಸ್ಪಟಿಕ ಮಣಿಯ ಮಾಲೆ ಅ ದಿಂದ ಕ್ಷ ವರೆಗೆ ಸ್ವರ ವರ್ಣಗಳನ್ನೇ ಕೋದು ಜಪಮಾಲೆಯನ್ನಾಗಿ ಮಾಡಿ ಸದಾ ಮಣಿಗಳನ್ನೆಣಿಸುತ್ತಾ ಛಂದೋಬದ್ಧವಾದ ಸಾಹಿತ್ಯ ರಚನೆಗೈಯುವ ಸಂಕೇತವೇ ಅಕ್ಷಮಾಲೆ. ಮಾಡುವ ಕ್ರಿಯೆಯು ಸಾಹಿತ್ಯವಾಗಬೇಕಾದರೆ ಲೆಕ್ಕಾಚಾರದಿಂದ ಕೂಡಿ ಅಚ್ಚುಕಟ್ಟಾಗಿರಬೇಕು. ಸಾವಧಾನವಾಗಿ, ಸ್ವಯಂ ಶಿಸ್ತಿನಿಂದ, ಸತತ ಚಲನ ಶೀಲತೆಯಿಂದಿದ್ದು ಸ್ಪಟಿಕದಂತೆ ಸ್ಪಷ್ಟತೆ ಮತ್ತು ಪಾರದರ್ಶಕತೆಯಿರಬೇಕೆಂಬುದೇ ಸ್ಫಟಿಕಾಕ್ಷ ಮಾಲೆಯ ಸಂಕೇತ

ಪದ್ಮಾಸನೇ ಸಂಸ್ಥಿತಾಂ ಎಂಬುದನ್ನು ಯೋಗಶಾಸ್ತ್ರದ ಪದ್ಮಾಸನವೆಂದೂ ಅರ್ಥೈಸ ಬಹುದು. ವಿದ್ಯಾ ಸಾಧಕನು ಪದ್ಮಾಸನದಲ್ಲಿ ಧ್ಯಾನ, ಮನನ, ನಿಧಿಧ್ಯಾಸನ ಮೊದಲಾದ ಪ್ರಕ್ರಿಯೆಗಳ ಮೂಲಕ ಅಪೇಕ್ಷಿತ ಸಿದ್ಧಿಯನ್ನು ಕ್ಷಿಪ್ರವಾಗಿ ಪಡೆಯಬಹುದೆಂಬ ಸಂಕೇತವೇ ಪದ್ಮಾಸನ ಸಂಸ್ಥಿತೆಯಾದ ಸರಸ್ವತೀ ದೇವಿ. ಸರಸ್ವತಿಯು ಸಮಸ್ತ 'ಜೀವರಾಶಿಗೆ ಪರಮ ಈಶ್ವರಿ ಒಡತಿ. ಸಕಲ ಐಶ್ವರ್ಯ ಸಂಪನ್ನೆ , ಬುದ್ಧಿಪ್ರದೆ.

ಸಾಂಕೇತಿಕವಾಗಿ ಅತ್ಯಂತ ಮಹತ್ವವುಳ್ಳ ಸರಸ್ವತೀ ದೇವಿಯು ವೇದಾಧಾರಿತ ಸೃಷ್ಟಿನಿರತ ಚತುರ್ಮುಖಿ ಬ್ರಹ್ಮನು ಮಾಡುವ ಸೃಜನ ಕ್ರಿಯೆಯಲ್ಲಿ ಬೆಂಬಲ ನೀಡುವ ಯಂತ್ರ ರೂಪಳಾಗಿ, ವಿಶ್ವಪಾಲಕ ವಿಷ್ಣುವಿನ ಪರಿಪಾಲನಾ ಕ್ರಿಯೆಯಲ್ಲಿ ಯುಕ್ತಾಯುಕ್ತ ವಿವೇಕವನ್ನೀಯುವ ಮಂತ್ರ ದರ್ಶಿನಿಯಾಗಿ, ಪರಶಿವನ ಪ್ರಳಯಕ್ರಿಯೆಯಲ್ಲಿ ತಂತ್ರ ದರ್ಶಿನಿಯಾಗಿ ಲೋಕದ ಸೃಷ್ಟಿ, ಸ್ಥಿತಿ, ಲಯ ಕ್ರಿಯೆಗಳ ಸೂತ್ರಧಾರಳು ಆದುದರಿಂದಲೇ ಭಕ್ತರು '**ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿಃ ದೇವೈಃ ಸದಾ ವಂದಿತಾ ಸಾ ಮಾಂ ಪಾತು ಸರಸ್ವತೀ ಭಗವತೀ**' ಎಂದು ಮೊರೆಯಿಡುತ್ತಾ ಶರಣಾಗತರಾಗುತ್ತಾರೆ. ಲೋಕ ಕಲ್ಯಾಣಕ್ಕಾಗಿ ಭಕ್ತಿಯುಕ್ತವಾಗಿ ಪ್ರಾರ್ಥಿಸುತ್ತಾರೆ.





# ವಿಶ್ವಪಾಲಕ ವಿಷ್ಣು

ಲೌಕಿಕ ಜಗತ್ತಿನ ಅತ್ಯುಚ್ಚ ನಿರ್ವಹಣಾಧಿಕಾರಿಗಿರುವ ಸಕಲ ಭೋಗ ಭಾಗ್ಯಗಳೂ ವಿಷ್ಣುವಿಗಿರುವಂತೆ ಮೂರ್ತಿ ಕಲ್ಪನೆಯನ್ನು ಮಾಡಿರುವ ನಮ್ಮ ದಿವ್ಯದೃಷ್ಟಾರರ ಸಮ್ಯಕ್‌ದರ್ಶನ ಅತ್ಯದ್ಭುತ.

ಹರಿಯ ಮನೆ ಹಾಲುಗಡಲು. ಇದು ಆರೋಗ್ಯಕರ, ಶುಭ್ರ, ಪೋಷಕ, ನೈಜ ಪರಿಸರದ ಪ್ರತೀಕ ಕಲುಷಿತವಾಗಲು ಆಸ್ಪದವಿರುವ ಹಾಲುಬಿಳುಪಿನ ಸಂಕೇತ. ಎಚ್ಚರಿಕೆಯ ಅಗತ್ಯವನ್ನು ಒತ್ತಿ ಹೇಳುವ ಸೂಚನೆ ಮನಸ್ಸಿಗೆ ಮುದವೀಯುವುದಕ್ಕಾಗಿ ತುಂಬುರು ನಾರದರಿಂದ ಸದಾನಂದ ಸೃಷ್ಟಿಸುವ ಅಮರ ನಾದಲೋಕ. ಈರೇಳು ಲೋಕದಲ್ಲಿ ನಡೆಯುವ ವಿದ್ಯಮಾನಗಳ ಪ್ರಜ್ಞಾವಂತ, ದಕ್ಷವರದಿಗಾರ ನಾರದ. ಒಡೆಯನು ಅಪೇಕ್ಷಿಸಿದಲ್ಲಿಗೆ ಹೊತ್ತೊಯ್ಯಲು ಸದಾ ಸಿದ್ಧವಾಗಿರುವ ಖಾಸಗಿ ವಿಹಗವಾಹನ (ವಿಮಾನ) ಗರುಡ. ಸ್ಥಿರಸ್ವತ್ತುಗಳ ಪ್ರತೀಕವಾದ ಭೂದೇವಿ ವಿಷ್ಣುವಿನ ಪಾದ ಬುಡದಲ್ಲಿದ್ದು ಸೇವಿಸುತ್ತಾಳೆ. ಚರಸ್ವತ್ತಿನ ಮತ್ತು ಸರ್ವ ಸಂಪತ್ತುಗಳ ಅಧಿದೇವತೆಯಾದ ಲಕ್ಷ್ಮಿಯು ಹೃದಯ ಸ್ಥಾನದಲ್ಲಿದ್ದು ಸೇವಿಸಲು ಸದಾ ಸಿದ್ಧ.

ವಿಷ್ಣುವಿನ ಆಯುಧಗಳೂ ಅರ್ಥಗರ್ಭಿತ ಸಂಕೇತಗಳು.

ಸಹಸ್ರಾರವುಳ್ಳ ಸುದರ್ಶನ. ಅಂದರೆ, ಒಳ್ಳೆಯದನ್ನು ತೋರಿಸುವ ಪ್ರಗತಿಗೆ ಸಾಧಕ. ಎದುರಾಗುವ ಅಡ್ಡಿ, ಆತಂಕ, ಆಲಸ್ಯ, ಅಜ್ಞಾನಗಳೇ ಮೊದಲಾದ ಆಸುರೀ ಶಕ್ತಿಗಳನ್ನು ನಿರ್ನಾಮಮಾಡುವ ಪ್ರಬಲ ಅಸ್ತ್ರ ಇದು ರಥಾಂಗ- ಅಂದರೆ ಜೀವನ ರಥದ ಅಂಗ. ಪ್ರಗತಿ ಚಕ್ರದ ಅಂಗ. ಬದಲಾವಣೆಗಳ ಸಂಕೇತ - ಇದಿಲ್ಲದೆ ಜೀವನ ನಿಶ್ಚಲ

ಶಂಖವು ಪಾಂಚಜನ್ಯ ಹೆಸರೇ ಸೂಚಿಸುವಂತೆ 'ಪಂಚಜನ'ಗಳಿಂದ ಜನ್ಯ. ಪಂಚಭೂತಗಳಿಂದ ನಿರ್ಮಿತವಾದ ಜಡದೇಹದ ಒಡಲೊಳಗೆ ದೈವೀ ಚೇತನ ತಾಳಿ,

ಪ್ರವೇಶವಾದಾಗ ಉಂಟಾಗುವುದು ದಿವ್ಯನಾದ. ತುಂಬುವುದು ನವಚೇತನ ಚಿಮ್ಮುವುದು ಕಾರ್ಯೋತ್ಸಾಹಗಳ ಚಿಲುಮೆ. ಉಂಟಾಗುವುದು ನಾದಲೀಲಾ ಕಾರಂಜಿ. ಶಂಖದ ಒಡಲನ್ನು ಸೇರಿದ ಜಲವು ಹೊರ ಹರಿಯುವುದು ಪವಿತ್ರ ತೀರ್ಥವಾಗಿ ಒಡಲಿನ ಮಾಲಿನ್ಯ, ಮನಸ್ಸಿನ ಮಾಲಿನ್ಯ, ಜಡತೆ, ಆಲಸ್ಯ. ಅಜ್ಞಾನಗಳ ನಿರ್ಮೂಲನವೇ ಪವಿತ್ರ ಶಂಖದ ಅದ್ಭುತ ಸಂಸ್ಕರಣ ಶಕ್ತಿ

ದಂಡ ವಿಧಾನದ ಪ್ರತೀಕವೇ ಗದೆ. ಇದರ ಹೆಸರು ಕೌಮೋದಕೀ. ಸಜ್ಜನರಿಗೆ ಮುದವನ್ನಿತ್ತು ದುರ್ಜನರಿಗೆ ಭಯಂಕರವಾದುದು.

ಖಡ್ಗವು ನಂದಕ. ಹೆಸರೇ ಸೂಚಿಸುವಂತೆ ಸಂತೋಷವನ್ನುಂಟು ಮಾಡುವಂತದ್ದು ಅಂದರೆ ಉದ್ಯಾನದ ಮಾಲಿಯ ಕೈಯಲ್ಲಿರುವ ಚೂರಿಯಂತೆ ಸೃಜನಶೀಲವಾದುದು ವೈದ್ಯರ ಕೈಯಲ್ಲಿರುವ ಶಸ್ತ್ರದಂತೆ ಭವರೋಗ ಹಾರಿಯಾದುದು. ಆನಂದದಾಯಕ ಪ್ರಬಲ ಶಸ್ತ್ರವೇ ನಂದಕ.

ಸೂಕ್ಷ್ಮ, ಸುಕೋಮಲವಾದ, ಪದ್ಮವು ಸಜ್ಜನಿಕೆ, ಸಭ್ಯತೆ, ಸಂಸ್ಕೃತಿಗಳ ಮೂರ್ತಿರೂಪ. ಮನೋವಿಕಾಸ, ಮನೋರಂಜನೆ, ಮನೋಬಲಗಳ ಸಮೃದ್ಧ ಮಿಲನಗಳ ಪ್ರಾಕೃತಿಕ ಸಂಕೇತ.

ಪಂಚಮವೇದದ ಸೃಷ್ಟಿಕರ್ತ, ಅನುಪಮ ಜ್ಞಾನನಿಧಿ ವೇದವ್ಯಾಸರಿಂದ ರಚಿತವಾದ ವಿಷ್ಣುವಿನ ಧ್ಯಾನ ಶ್ಲೋಕವೊಂದು ಇಂತಿದೆ·

**ಶಾಂತಾಕಾರಂ ಭುಜಗ ಶಯನಂ ಪದ್ಮನಾಭಂ ಸುರೇಶಂ ॥**
**ವಿಶ್ವಾಧಾರಂ ಗಗನ ಸದೃಶಂ ಮೇಘವರ್ಣಂ ಶುಭಾಂಗಂ ॥**
**ಲಕ್ಷ್ಮೀಕಾಂತಂ ಕಮಲ ನಯನಂ ಯೋಗಿ ಹೃಧ್ಯಾನಗಮ್ಯಂ ।**
**ವಂದೇ ವಿಷ್ಣುಂ ಭವ ಭಯ ಹರಂ ಸರ್ವಲೋಕೈಕನಾಥಂ ॥**

ಈ ಶ್ಲೋಕದ ಪ್ರತಿಯೊಂದು ಶಬ್ದದ ಆಳ ಮತ್ತು ವಿಸ್ತಾರ ವಿಸ್ಮಯಾದ್ಭುತ. ಪರಿಪಾಲನಾ ಪ್ರಮುಖನಲ್ಲಿರಬೇಕಾದ ಮುಖ್ಯ ಲಕ್ಷಣವೇ ಶಾಂತತೆ. ರೂಪವೂ ಶಾಂತಿದಾಯಕ. ವಚನ ವ್ಯವಹಾರಗಳೂ ಶಾಂತಕರವಾಗಿದ್ದು ದರ್ಶಕರಿಗೆ ಸಾಂತ್ವನದಾಯಕ, ಆಹ್ಲಾದಕರ ವಾಗಿರುವುದೇ ವಿಷ್ಣುವಿನ ಪ್ರಥಮ ಗುಣ.

ಭುಜಗ ಅಂದರೆ ಭುಜದ ಮೂಲಕ ಗಮನಮಾಡುವುದು ಹಾಗೂ ತನ್ನ ಭುಜ ಬಲದ ಮೂಲಕ ಪ್ರಗತಿ ಸಾಧಿಸುವ ಜೀವಿಯೇ ಭುಜಗ. ಭುಜಗದ ಮೇಲೆ ಭರವಸೆ·

ಭುಜಗವು ತಂಪಿನ ಪ್ರತೀಕ ಪರಿಪಾಲನಾ ಕರ್ತೃವು ಕಾಮಕ್ರೋಧಾದಿ ತಾಪಗಳಿಂದ ಮುಕ್ತನಾಗಿ ಸದಾ ತಣ್ಣಗಿನ ಮನೋಭಾವ ಹೊಂದಿರಬೇಕೆಂಬುದೇ ಭುಜಗ ಶಯನದ ಅಂತರಾರ್ಥ

ವಿಷ್ಣುವು ಪದ್ಮನಾಭ ಅಂದರೆ ಸೃಷ್ಟಿಕರ್ತನಾದ ಬ್ರಹ್ಮನ ಆವಾಸ ಸ್ಥಾನವಾದ ಪದ್ಮಕ್ಕೂ ನಿರ್ವಾಹಕನ ಶಾರೀರಿಕ ವ್ಯವಸ್ಥೆಗೂ ಕಮಲನಾಳದ ಸಂಪರ್ಕನಾಭಿಯ ಮೂಲಕ. ಇದು ಗುಪ್ತ ಸಂಪರ್ಕ. ಸೃಷ್ಟಿಗೆ ಪೂರ್ವಭಾವಿಯಾದ ಮೂಲ ಭೂತ ಸಂಪರ್ಕ ಸುಸ್ಥಿತಿಗೆ ಸಮಂಜಸವಾದ ಸುವ್ಯವಸ್ಥಿತ ಸೃಷ್ಟಿಯಕಡೆಗೆ ಆದ್ಯಗಮನ ನಿರಂತರ ನಿರೀಕ್ಷಣೆ. ನಿರ್ವಹಣೆಯಲ್ಲಿ ದಕ್ಷತೆ, ಉತ್ಪಾದನೆ, ವಿತರಣೆ, ಉಪಯೋಗ, ಬೆಳವಣಿಗೆಗಳು ಪ್ರತ್ಯಕ್ಷವಾಗಿ ಕಾಣಬೇಕಾದುದು ಕಾರ್ಯಾಗಾರದ ಸಮರ್ಥ ನಿರ್ವಹಣೆಗೆ ಅತ್ಯವಶ್ಯವೆಂಬ ಆಧುನಿಕ ಅನುಭವ ಮತ್ತು ವ್ಯಾವಹಾರಿಕ ಚತುರತೆಗಳಿಗೆ ಸರಿಸಮನಾದ ಪೌರಾಣಿಕ ಕಲ್ಪನೆಯೇ 'ಪದ್ಮನಾಭ'.

ಜಗತ್ತಿನ ಸುವ್ಯವಸ್ಥೆ, ಸಮೃದ್ಧಿ, ಸಂಪನ್ನತೆ ಮತ್ತು ಸಮತೋಲನಗಳ ನಿಯಮಪಾಲಕರೇ ಅಷ್ಟದಿಕ್ಪಾಲಕರಾದಿ ಸುರಸಂದೋಹ. ವಿಷ್ಣುವು ಈ ಸುರಗಣದ ಈಶ. ಅಂದರೆ ವಿವಿಧ ವಿಭಾಗಗಳ ನಿರ್ವಹಣಾಧಿಕಾರಿಗಳ ಮುಖ್ಯಸ್ಥ - 'ಸುರೇಶ'. ವಿಶ್ವದ ಯೋಗಕ್ಷೇಮಗಳನ್ನು ಸುರರ ಮೂಲಕ ನಿರ್ವಹಿಸುವ ಅಮರ ಪ್ರಭು.

ವಿಶ್ವಕ್ಕೆ ಆಧಾರನಾದ ವಿಷ್ಣುವಿಗೆ ವಿಶ್ವವೇ ಕಾರ್ಯಕ್ಷೇತ್ರ. ಪರಿಪಾಲನಾ ಲೀಲಾ ವಿನೋದನಿಗೆ ಈರೇಳು ಲೋಕಗಳೇ ಆಡುಂಬೊಲ

ವಿಷ್ಣುವು ಗಗನದಂತೆ. ಸಕಲ ಜೀವರಾಶಿಗೆ ಆಶ್ರಯವೀಯುವ ಅವಕಾಶದಾಯಕ ಅಮೂರ್ತವಾಗಿರುವ ಆಕಾಶವು ಆಧುನಿಕ ಸರಕಾರದಂತೆ. ಎಲ್ಲೆಡೆಯೂ ಇದೆ ಕಂಡಂತೆ ಭಾಸವಾದರೂ, ಪ್ರತ್ಯಕ್ಷವಾಗಿ ಕಾಣುತ್ತಿಲ್ಲ. ಅದರಂತೆ ವಿಷ್ಣುವು ಸರ್ವವ್ಯಾಪಿಯಾಗಿ, ಸಕಲ ಪ್ರಾಣಿಗಳಲ್ಲಿ ಪ್ರವೇಶಿಸಿ ಚೇತನ ರೂಪಿಯಾಗಿರುವವನು. ಸಾಂದ್ರವಾದ ಜಲ ಬಾಷ್ಪವನ್ನು ತುಂಬಿಕೊಂಡಿರುವ ಮೋಡದಂತೆ ನವನೀರದ ಶ್ಯಾಮಲವರ್ಣನು ಅಂಬುಧಿ ಆಕಾಶಗಳಂತೆ ನೀಲವರ್ಣನು

ಸರ್ವಾಂಗ ಸುಂದರ ವಿಷ್ಣುವು ಶುಭಾಂಗ. ಪ್ರಜೆಗಳಿಗೆ ಶುಭಕರನಾದ ಪ್ರಭುವಿನ ಒಂದೊಂದು ಅಂಗವೂ ಶುಭಕರ. ಮಂದಸ್ಮಿತ, ಕಡೆಗಣ್ಣ ನೋಟ, ಪುಷ್ಪಹಸ್ತ, ಅಭಯವರದ ಮುದ್ರೆಗಳೇ ಮೊದಲಾದ ಪ್ರತಿಯೊಂದು ಅಂಗ ಭಂಗಿಯೂ ಮನೋಹರ. ಆನಂದ ವರ್ಧಕ.

ಲಕ್ಷ್ಮೀಕಾಂತ - ಸಕಲ ಭೋಗೈಶ್ವರ್ಯಗಳಿಗೆ ಕಾಂತ. ಅಂದರೆ, ಒಡೆಯ. ಲಕ್ಷ್ಮೀಕಾಂತನೇ ಹೊರತು ಸಂಪತ್ತಿನಿಂದ ಆಕರ್ಷಿತವಾದವನಲ್ಲ. ಮೌಲಿಕವಾದ ಹೃದಯ ಸಂಪತ್ತನ್ನು ಹೊಂದಿರುವ ಲಕ್ಷ್ಮೀನಿವಾಸ. ಶ್ರೀವತ್ಸಾಂಕಿತ ವಕ್ಷಸ ಪರಿಪಾಲನಾ ದಕ್ಷತೆಗೆ ಭೌತಿಕ ಸಂಪತ್ತಿನ ಜತೆಗೆ ಬೌದ್ಧಿಕ ಮತ್ತು ಭಾವ ಸಂಪತ್ತು ಸಮೃದ್ಧವಾಗಿರಬೇಕೆಂಬ ಸಂಕೇತವೇ ಶ್ರೀವತ್ಸವಕ್ಷ.

ಕಮಲದಳದಂತೆ ವಿಶಾಲವಾದ ಪ್ರಫುಲ್ಲವಾದ, ಶುಭ್ರವಾದ, ಆಹ್ಲಾದಕರ ದೃಷ್ಟಿಯೇ ವಿಷ್ಣುವಿನ ಮೋಹಕ ಶಕ್ತಿ. ಈ ದಿವ್ಯ ದೃಷ್ಟಿಯೇ ಜೀವರಾಶಿಯ ಸ್ಥಿತಿಗತಿಗಳ ಸೂತ್ರ. ಕಮಲ ಕೆಸರಲ್ಲಿ ಹುಟ್ಟಿ ನೀರಿನ ನಡುವೆಯೂ ನಿರ್ಲಿಪ್ತವಾಗಿ ಸೌರಶಕ್ತಿಯ ಪ್ರಭಾವದಿಂದ ಪ್ರಬಲವಾಗಿ ಲಕ್ಷ್ಮೀಸರಸ್ವತಿ ಬ್ರಹ್ಮ (ಸಂಪತ್ತು, ಜ್ಞಾನ, ಸೃಜನಶಕ್ತಿ) ರಾದಿಯಾದ ದೇವತೆಗಳಿಗೆ ಆವಾಸಸ್ಥಾನವನ್ನೊದಗಿಸುವ ಶ್ರಮಿಕ ಜೀವಿಗಳ ಸಂಕೇತ. ಈ ಜೀವಿಗಳ ಯೋಗಕ್ಷೇಮದ ಕಡೆಗೆ ಕಣ್ಣಲ್ಲಿ ಕಣ್ಣಿಟ್ಟು ನಿಗಾ ಇಡಬೇಕಾದ ಆವಶ್ಯಕತೆಯನ್ನು ಒತ್ತಿ ಹೇಳುವ ವ್ಯಾವಹಾರಿಕ ದಕ್ಷತೆಯೇ 'ಕಮಲನಯನದ ಸಂಕೇತ'

ಮನಸ್ಸು, ಬುದ್ಧಿ, ವಿವೇಕಗಳನ್ನು ಜ್ಞಾನ, ಭಕ್ತಿ ವೈರಾಗ್ಯಗಳ ಮೂಲಕ ವಿನಿಯೋಜಿಸಿ ಲೋಕಕ್ಷೇಮ ಸಾಧಿಸಲು ಸತತ ತಪೋನಿರತರಾಗಿರುವವರೇ ಯೋಗಿಗಳು ವಿಷ್ಣುವಿನ ಪರಿಪೂರ್ಣತೆ ಮತ್ತು ಮಹತ್ವವನ್ನು ಇಂತಹ ಯೋಗಿಗಳು ಮಾತ್ರ ಧ್ಯಾನಿಸಿ ಮನದಟ್ಟು ಮಾಡಿಕೊಳ್ಳಬಲ್ಲರು.

ಸಕಲ ಭವ ಭಯಹರನಾದ ವಿಷ್ಣುವು ಸರ್ವಲೋಕಕ್ಕೆ ಏಕೈಕ ಒಡೆಯ. ಲೋಕದ ಜೀವರಲ್ಲಿ ಉಂಟಾಗುವ ಕ್ಷೋಭೆ, ಮಾನಸಿಕ ಉದ್ವಿಗ್ನತೆ, ಆದಿವ್ಯಾಧಿ, ತಾಪತ್ರಯ ಜನ್ಯ ಭಯಭೀತಿಗಳನ್ನು ನಿವಾರಿಸಲು ಸಮರ್ಥನಾದ ಆಡಳಿತಗಾರ ಸುವ್ಯವಸ್ಥೆಗೆ ಭಂಗ ತರುವ ಆಸುರೀ ಶಕ್ತಿಗಳ ದಮನಕ್ಕೆ ಸರ್ವಸಮರ್ಥ.

ವಿಷ್ಣುವಿನ ಆಕಾರ, ಆಯುಧ, ಸ್ವಭಾವ, ಕಾರ್ಯವಿಧಾನ, ಪರಿಸರ, ಪರಿಕರ, ಪರಿವಾರ, ಭೋಗೈಶ್ವರ್ಯಗಳು ಇತ್ಯಾದಿಗಳನ್ನು ಮನನ ಮಾಡಿದಾಗ ಒಬ್ಬ ಅತ್ಯಾಧುನಿಕ, ಅತ್ಯುಚ್ಚ, ಅತಿಸಮರ್ಥ ನಿರ್ವಹಣಾಧಿಕಾರಿಯ ದೃಶ್ಯ ಕಣ್ಣಿಗೆ ಕಟ್ಟಿದಂತಾಗುತ್ತದೆ. ಮಹಾನ್ ದೃಷ್ಟಾರ ವೇದವ್ಯಾಸರ ಅದ್ಭುತ ಕಲ್ಪನೆಗೆ ಮೂಕ ವಿಸ್ಮಿತರಾಗಿ ಹರ್ಷ ಪುಳಕಿತರಾಗುತ್ತೇವೆ. ಧ್ಯಾನಿಸಿ ಧನ್ಯರಾಗುತ್ತೇವೆ. ಪೂಜಿಸಿ ಪುನೀತರಾಗುತ್ತೇವೆ.





# ಲಯಕರ ಶಂಕರ

ವಿಶ್ವದ ಲಯಕಾರ್ಯ ನಿಯಾಮಕನಾದ ಮಹೇಶ್ವರನು ಶಂಕರ. ರುದ್ರರೂಪಿಯಾದರೂ ಸದಾಶಿವ. ಕಾಲ ಸ್ವರೂಪಿಯಾಗಿ ಮೃತ್ಯುಂಜಯ. ಲಿಂಗಾಕಾರನಾಗಿ ನಿಗೂಢರೂಪಿ. ತನ್ನ ಪಂಚಮುಖಗಳಿಂದ ವಿಶ್ವದ ಸಮಸ್ತವಿದ್ಯಮಾನಗಳನ್ನು ಪರಿವೀಕ್ಷಿಸುತ್ತಾ ಸೂರ್ಯಚಂದ್ರರೆಂಬ ನಯನಗಳ ಮೂಲಕ ಸಾಕ್ಷೀ ಸ್ವರೂಪಿಯಾಗಿ, ಜ್ಞಾನವೆಂಬ ಮೂರನೆಯ ಅಂತಶ್ಚಕ್ಷುವಿನ ಮೂಲಕ ಯುಕ್ತಾಯುಕ್ತ ವಿವೇಚನೆಯಿಂದ ಲಯಕಾರ್ಯವನ್ನು ನ್ಯಾಯ ಬದ್ಧವಾಗಿ, ವ್ಯವಸ್ಥಿತವಾಗಿ ಮಾಡಿ ಸೃಜನಕ್ರಿಯೆಗೆ ಪೂರಕ ಪರಿಸ್ಥಿತಿಯನ್ನುಂಟು ಮಾಡುವುದೇ ಪರಮೇಶ್ವರ ಮೂರ್ತಿಯ ಮಹತ್ವ.

ಆಧುನಿಕ ವ್ಯವಸ್ಥೆಗೆ ಅನ್ವಯಿಸಿ ಹೇಳುವುದಾದರೆ ನ್ಯಾಯ ಮತ್ತು ವ್ಯವಸ್ಥೆಯ ಅತ್ಯುನ್ನತ ಅಧಿಕಾರಿಯೇ ರುದ್ರರೂಪೀ ಶಂಕರ. ಆರಕ್ಷಕ ಮತ್ತು ನ್ಯಾಯಾಂಗ ಇಲಾಖೆಗಳ ಪ್ರಮುಖ ಧ್ಯೇಯಗಳು - ಅವ್ಯವಸ್ಥೆಯ ನಿವಾರಣೆ, ಅನುಪಯುಕ್ತ ಹಾಗೂ ಅಹಿತಕರ ಮಾರಕ ವಸ್ತುಗಳ ನಾಶ. ಸ್ಥಿತ್ಯಂತರ ಮತ್ತು ನಾಶಗಳೆಂಬ ಎರಡು ವಿಧಾನಗಳ ಮೂಲಕ ಲಯಕ್ರಿಯೆ ನಡೆಯಬೇಕಾಗಿದೆ. ಈ ವಿಧಾನಗಳನ್ನು ಅನುಷ್ಠಾನಗೊಳಿಸಲು ಇರಬೇಕಾದ ಅತ್ಯವಶ್ಯಕ ಗುಣಗಳೆಂದರೆ - ನ್ಯಾಯ ವಿವೇಚನೆ, ನಿಸ್ಪೃಹತೆ, ಅಚಲವಾದ ಕರ್ತವ್ಯನಿಷ್ಠೆ, ಶೀತಲ ಸಮಚಿತ್ತ; ಶಾಂತಮನೋಭಾವ; ವಸ್ತುನಿಷ್ಠ ಕಠಿಣ ನಿರ್ಧಾರ. ನಾಶ ಮಾಡುವುದರ ಮೂಲಕ ಸದಾ ಶಿವ (ಹಿತ), ಶಂ(ಶುಭ)ಕರ ವಾಗುವಂತಹ ವಿಧಾನಗಳ ಆವಿಷ್ಕಾರ ಮತ್ತು ಅನುಷ್ಠಾನಗಳ ಬಗ್ಗೆ ಸದಾ ತಪಸ್ಸು (ತಲೆಬಿಸಿ) ಇವೇ ಮೊದಲಾದ ವಿಸ್ಮಯಾದ್ಭುತ ಗುಣಗಳ ಸಾಕಾರ ಮೂರ್ತಿಯೇ ಈಶ್ವರ

ಶಿವಮಾರ್ಗ ಪ್ರಣೇತಾರನಾದ ಸದಾಶಿವನು ಸರಳತೆಯ ಸಾಕಾರ. ಹಿಮಗಿರಿಯಲ್ಲಿ ಸಂಸಾರ, ಸ್ಮಶಾನದಲ್ಲಿ ಸಂಚಾರ. ಪುಣ್ಯಪುರುಷರ ದಗ್ಧದೇಹದ ಭಸ್ಮ ಲೇಪನ ಪ್ರಿಯ

ಚರ್ಮಾಂಬರ ಅಥವಾ ದಿಗಂಬರ. ಚಂದ್ರಗಂಗೆಯರಿಂದ ದ್ವಿವಿಧ ಶೀತಲ ಶಿರೋಭೂಷಣ. ಲೋಕಕಲ್ಯಾಣಕ್ಕಾಗಿ ವಿಷವನ್ನೇ ಕುಡಿದ ವಿಷಕಂಠ. ವಿಷಕಾರಕ ಪ್ರಾಣಿಯಾದ ನಾಗವೇ ಆಭರಣ. ಇದು ದುಷ್ಟ ಶಕ್ತಿಗಳನ್ನು ನಿಯಂತ್ರಿಸಿ ಅವುಗಳಿಂದ ಕಾರ್ಯ ಸಾಧಿಸುವ ಸಂಕೇತ. ತನ್ನ ಪದತಲದಲ್ಲಿ ಆಸುರೀ ಶಕ್ತಿಗಳನ್ನು ನಿಯಂತ್ರಿಸಿ, ಮರ್ದಿಸಿ ನರ್ತಿಸುವ ಈಶ್ವರನು ನಟರಾಜ.

ಶಂಕರನ ಆಯುಧಗಳೂ ಅರ್ಥಪೂರ್ಣ. ಪಿನಾಕವೆಂಬ ಬಿಲ್ಲು, ಪಾಶುಪತವೆಂಬ ಅಸ್ತ್ರ. ಅಂದರೆ, ಸಮಸ್ತ ಪಶುಗಳನ್ನೇ ತನ್ನ ಅಧೀನದಲ್ಲಿರಿಸಿಕೊಳ್ಳ ಬಲ್ಲ ಪಶುಪತಿಯಾಗಿ ಸಮಸ್ತ ಪಶುಪ್ರಾಣಿಗಳ ಸಂಹಾರ ಹಾಗೂ ಮರುಹುಟ್ಟಿಗೆ ಮೂಲಧಾರವಾದವನು ಶಂಕರ

ವ್ಯಾಕರಣ ಶಾಸ್ತ್ರದ ಮೂಲ ಸೂತ್ರಗಳನ್ನೇ ನಿನದಿಸಿದ ಡಮರುಗವು, ಲಯಕಾರ್ಯಕ್ಕೆ ಆಧಾರವಾದ ಸಾಹಿತ್ಯವು ವ್ಯಾಕರಣ ಬದ್ಧವಾಗಿ, ನಿಷ್ಕೃಷ್ಟವಾಗಿರಬೇಕೆಂಬುದು ಒಂದು ಸಂಕೇತವಾದರೆ, ಸಂಗೀತ, ನಾಟ್ಯ ಮೊದಲಾದ ಲಲಿತಕಲೆಗಳಲ್ಲಿ ಲಯದ ಪ್ರಾಮುಖ್ಯವನ್ನು ಎತ್ತಿ ತೋರುವುದೇ ಇನ್ನೊಂದು ಸಂಕೇತ. ಲೋಕ ಕಂಟಕರಾದ ತ್ರಿಪುರಾಸುರರನ್ನು, ಮನುಕುಲವನ್ನು ಬಾಧಿಸುವ ತಾಪತ್ರಯಗಳನ್ನು, ಸಾಧಕರನ್ನು ಬಾಧಿಸುವ ಕಾಮಾದಿತ್ರಯಗಳನ್ನು ನಿರ್ನಾಮ ಮಾಡುವ ಸಂಕೇತವೇ ತ್ರಿಶೂಲ. ಹರಿಣ, ಚಂಚಲಮನದ, ಮೋಹಕತೆಯ ಸಂಕೇತ. ಕಪಾಲವು ವೈರಾಗ್ಯದ ಸಂಕೇತ. ಭಿಕ್ಷಾಟನೆಯು ಗರ್ವಭಂಗದ ಸಂಕೇತ.

ನ್ಯಾಯ ಮತ್ತು ವ್ಯವಸ್ಥೆಗಳ ಹೊಣೆಗಾರಿಕೆಯನ್ನು ಹೊತ್ತಿರುವವನಿಗೆ ಸದಾ ಧ್ಯಾನ, ತಪಸ್ಸು, ಏಕಾಗ್ರತೆ, ವೈರಾಗ್ಯ, ಸಮಚಿತ್ತ, ವಿವೇಚನೆ, ಏಕಾಂತತೆ ಅತ್ಯವಶ್ಯ. ಇದಕ್ಕಾಗಿ ನಾಗರಿಕತೆಯಿಂದ ದೂರವಿರುವ ಹಿಮಗಿರಿಯೇ ಸೂಕ್ತ ಸ್ಥಳ. ಅದು ಬಿಟ್ಟರೆ ನಗರದಲ್ಲಿರುವ ಶ್ಮಶಾನವೇ ಪ್ರಶಸ್ತ ತಾಣ. ಸಮಷ್ಟಿಹಿತವನ್ನು ಸಾಧಿಸುವವನಿಗೆ ವೈಯಕ್ತಿಕ ಕಾಮ ಪರಮ ಶತ್ರು. ಇದಕ್ಕಾಗಿಯೇ ಶಂಕರನು ಕಾಮಾರಿ. ಕಾಮೋತ್ಪಾದಕ ಅಂಗಗಳ (ಪ್ರಚೋದಕ ಪರಿಸರ ಮತ್ತು ಸಾಧನಗಳ) ವಿನಾಶಕ. ಭೋಗ ವಸ್ತುಗಳಿಂದ ವರ್ಜಿತ. ಪ್ರಕೃತಿಯ ತನುಜಾತೆಯಾದ ಪಾರ್ವತಿಯೇ ಸದಾಶಿವನಿಗೆ ಆದರ್ಶ ಸಾಧ್ವೀ ಸಂಗಾತಿ. ಜ್ಞಾನ ಸ್ವರೂಪಿ ಗಣಪತಿ, ಸಾಹಸ ಮೂರ್ತಿ ಸುಬ್ರಹ್ಮಣ್ಯರೇ ತನುಜಾತರು. ಕೃಷಿಕರ ಮಿತ್ರ ಬಸವನೇ ವಾಹನ. ಕಾಲಭೈರವನೇ ದಂಡ ನೀತಿಯನ್ನು ಜಾರಿಗೊಳಿಸುವ ದಂಡಾಧಿಕಾರಿ.

ಪ್ರಮಥ ಗಣಗಳೇ ಸಹಚರರು. ಸದಾಶಿವನ ಪರಿವಾರವೆಲ್ಲವೂ ಸರಳ ಸುಂದರ. ಕೃತ್ರಿಮವಿದೂರ. ಪ್ರಕೃತಿಯ ಶಕ್ತಿಗಳ ಸುಂದರ ಸಂಗಮ.

ತೋರಿಕೆಗೆ ನಿರ್ದಿಷ್ಟ ಬಾಹ್ಯ ಸ್ವರೂಪವಿಲ್ಲದಿದ್ದರೂ ಶಿವಶಕ್ತಿಯು ಸರ್ವವ್ಯಾಪಿ ಗಾಢ ಮತ್ತು ನಿಗೂಢ. ವಿಶ್ವವ್ಯಾಪಿಯಾಗಿ ಲಯಕಾರ್ಯದ ಮೂಲಕ ಮರು ಹುಟ್ಟಿಗೆ ಸೂಕ್ತ ಪರಿಸರ ನಿರ್ಮಿಸುವ ವ್ಯವಸ್ಥೆಯೇ ಲಿಂಗ ಸ್ವರೂಪದ ಸಂಕೇತ.

ಈಶ್ವರನ ಮೈಬಣ್ಣ ಸ್ಫಟಿಕದಂತೆ ಬಿಳುಪು. ಪಾರದರ್ಶಕ. ನ್ಯಾಯ ಪರಿಪಾಲಕನು ತನ್ನ ಪಾರದರ್ಶಕ ನೀತಿ ನಡತೆಗಳಿಂದ, ಸ್ಪಷ್ಟ ನಡೆನುಡಿಗಳಿಂದ, ವಿವೇಚನಾಯುಕ್ತ ವಸ್ತುನಿಷ್ಠ ದೃಢ ನಿರ್ಧಾರಗಳಿಂದ ಜನತೆಗೆ ರಕ್ಷಣೆಯ ಭರವಸೆಯನ್ನುಂಟು ಮಾಡಬೇಕು. ದಂಡನೆಯ ಭಯದಿಂದ ಶಿಸ್ತನ್ನು ಉತ್ತೇಜಿಸಬೇಕು. ನ್ಯಾಯ ಪಾಲಕರಾದ ಸಜ್ಜನರಿಗೆ ಸುಖ, ಸಂತೋಷ, ನೆಮ್ಮದಿಗಳಿಂದ ಕೂಡಿದ ಭದ್ರತಾ ಭಾವನೆಯನ್ನು ಸೃಷ್ಟಿಸಬೇಕು. ರುದ್ರನಾಗಿ, ಹರನಾಗಿ, ಕಾಲನಾಗಿ, ಭಯಂಕರನಾದರೂ, ವಿಶ್ವದ ಸಮಸ್ತ ಜೀವರಾಶಿಗಳಿಗೆ 'ಸದಾಶಿವ'ನಾಗಿ ಪರಿಣಮಿಸುವ ಅದ್ಭುತ ಸಂಕೇತವೇ ಈಶ್ವರ ಮೂರ್ತಿ, ರುದ್ರ, ತಾಂಡವದಿಂದ ಲಯಕರ್ತನಾದರೂ 'ಶಂಕರ'ನಾಗಿ ಸಚ್ಚಿದಾನಂದ ದಾಯಕನಾಗಿರುವ ಸತ್ಯಸಂಕೇತ.





# ಸಿರಿ ಸಂಪನ್ನೆ ಲಕ್ಷ್ಮೀದೇವಿ

**ಸ**ಕಲೈಶ್ವರ್ಯ ಸಂಪನ್ನೆ ಲಕ್ಷ್ಮೀದೇವಿಯು ವಿಶ್ವಪಾಲಕ ವಿಷ್ಣುವಿನ ಪರಿಪಾಲನಾ ಕಾರ್ಯಕ್ಕಾಗಿ ಸಂಪನ್ಮೂಲಗಳನ್ನೊದಗಿಸುವ ಅತ್ಯುತ್ಕೃಷ್ಟ ಕೋಶಾಧಿಕಾರಿಣಿ. ಲಕ್ಷ್ಯ (ಗುರಿ) + ಸಂಪನ್ನ ಅಂದರೆ ನಿರ್ದಿಷ್ಟ ಉದ್ದೇಶಕ್ಕೆ ಮಾತ್ರ ಸಾಕಷ್ಟು ಸಂಪತ್ತನ್ನೊದಗಿಸುವವಳು ಎಂಬ ಅರ್ಥವನ್ನು ಲಕ್ಷ್ಮೀ ಶಬ್ದವು ಸೂಚಿಸುತ್ತದೆ ಸ್ವಾಧೀನತ್ವ ಮತ್ತು ಸ್ವಾಮಿತ್ವ ಹಾಗೂ ಅನುಭೋಗಾರ್ಹತೆ ಇವುಗಳ ತಪ್ಪುಗ್ರಹಿಕೆಯ ಕಾರಣ ಕೋಶಾಧಿಕಾರಿಯನ್ನೇ ಸಂಪತ್ಸ್ವಾಮಿಯೆಂದು ತಿಳಿಯುವುದು ಮಾಯೆ. ಆದುದರಿಂದಲೇ ಇಂದು ನಾರಾಯಣರಹಿತ ಲಕ್ಷ್ಮಿಗೆ ಪ್ರಧಾನ ಪೂಜೆ. ಆದುದರಿಂದಲೇ ಇದು ನಿಷ್ಪ್ರಯೋಜಕ. ವಿಪತ್ಕಾರಕ.

ಸಂಪತ್ತಿನ ಅಧಿದೇವತೆ ಲಕ್ಷ್ಮೀ. ಅವಳಲ್ಲಿರುವ ಸಂಪತ್ತು ಅವಳದಲ್ಲ. ಅನುಭವಿಸುವ ಹಾಗಿಲ್ಲ. ಅದು ವಿಷ್ಣುವಿನ ಪರಿಪಾಲನಾ ಕಾರ್ಯಕ್ಕೆ ಮೀಸಲು. ಈ ಸತ್ಯವನ್ನರಿಯದೆ ಲಕ್ಷ್ಮಿಯ ಮಹಿಮೆಯರಿಯುವುದು ಅಸಾಧ್ಯ.

ಲಕ್ಷ್ಮೀದೇವಿಯ ಅಷ್ಟರೂಪಗಳೂ ಅರ್ಥಪೂರ್ಣ. ಆದಿಲಕ್ಷ್ಮಿ (ಮೂಲ ಬಂಡವಾಳ), ಧಾನ್ಯ ಲಕ್ಷ್ಮಿ (ಪ್ರಾಣಾಧಾರ ಧಾನ್ಯಕ್ಕಾಗಿರುವ ಬಂಡವಾಳ), ಧೈರ್ಯಲಕ್ಷ್ಮಿ (ಭದ್ರತೆ ಅಥವಾ ಧೈರ್ಯ ತುಂಬುವುದಕ್ಕಾಗಿರುವ ಸಂಪತ್ತು), ಸಂತಾನಲಕ್ಷ್ಮಿ (ಸತ್ಪ್ರಜೆಗಳ ಪಾಲನೆಗಾಗಿರುವುದು), ವಿಜಯಲಕ್ಷ್ಮಿ (ಪಂಥಾಹ್ವಾನವನ್ನು ಗೆಲ್ಲಲು ಇರುವುದು), ವಿದ್ಯಾಲಕ್ಷ್ಮಿ (ಶಿಕ್ಷಣಕ್ಕಾಗಿರುವುದು) ಮೊದಲಾದವುಗಳಿಗೆ ಮೀಸಲಿಟ್ಟ ವಿವಿಧ ಸಂಪತ್ತುಗಳಾಗಿವೆ. ಈ ಕಲ್ಪನೆ ಇಂದಿನ ಆರ್ಥಿಕ ನಿರ್ವಹಣೆಯ ಸೂತ್ರಗಳಿಗೆ ಅತಿಸಮೀಪದ ವಾಸ್ತವಿಕತೆ.

ಸಫಲತೆಯನ್ನೀಯುವ ಸಿದ್ಧಲಕ್ಷ್ಮೀಯಾಗಿ, ಭವಬಂಧನ ಬಿಡಿಸುವ ಮೋಕ್ಷಲಕ್ಷ್ಮೀಯಾಗಿ, ಸೋಲಿನ ಸಂಕಟದಿಂದ ಪಾರುಮಾಡುವ ಜಯಲಕ್ಷ್ಮೀಯಾಗಿ,

ಅಜ್ಞಾನವನ್ನು ದೂರಗೊಳಿಸುವ ಸರಸ್ವತಿಯಾಗಿ, ದೀನರಿಗೆ ಸಂಪತ್ತನ್ನೀಯುವ ಶ್ರೀಯಾಗಿ, ಬೇಡಿದವರಿಗೆ ವರವೀಯುವ ವರಲಕ್ಷ್ಮಿಯಾಗಿ, ವಿವಿಧ ರೂಪದಲ್ಲಿ ಆರಾಧಕರಿಗೆ ಪ್ರತ್ಯಕ್ಷವಾಗಿ ಗೋಚರಿಸುತ್ತಾಳೆ. ಸಂಪತ್ತಿನ ವಿವಿಧ ಉದ್ದೇಶ ಮತ್ತು ರೂಪಗಳಿಗೆ ಇದೊಂದು ಅತ್ಯುತ್ತಮ ಉದಾಹರಣೆ.

ಲಕ್ಷ್ಮಿಯ ಹಲವಾರು ಧ್ಯಾನ ಶ್ಲೋಕಗಳಲ್ಲಿ ಪದ್ಮಾಸನಸ್ಥಾ, ಪದ್ಮಕರಾ, ಸೌಂದರ್ಯಸ್ವರೂಪಿಣಿ, ಅಪರಂಜಿಯ ಕಾಂತಿಯಿಂದ ಕಂಗೊಳಿಸಿ, ಕನಕ ಕಲಶಗಳಿಂದ ಗಜದ್ವಯಗಳಿಂದ ಸ್ನಾಪಿತೆಯಾಗಿರುವುದು ಸಾಮಾನ್ಯ ಅಂಶಗಳು. ಯೋಗ ಶಾಸ್ತ್ರದ ಪದ್ಮಾಸನದಲ್ಲಿ ಸುಸ್ಥಿತೆಯಾಗಿ ವಿಶ್ವಕಲ್ಯಾಣಕ್ಕಾಗಿ ಸಂಪತ್ತನ್ನು ವಿನಿಯೋಜಿಸುವುದರಲ್ಲೇ ಧ್ಯಾನಮಗ್ನೆಯಾಗಿದ್ದಾಳೆ.

ಪದ್ಮವು ಪಂಕ (ಕೊಳಚೆ / ಕೆಸರು)ದಿಂದ ಉದ್ಭವವಾಗುವ ಸುಂದರ ಸಂಪತ್ತಿನ ಸಂಕೇತ. ಲೌಕಿಕ ಸಂಪತ್ತು ಯಾವಾಗಲೂ ಕೆಸರಿನಿಂದ (ಕೃಷಿ), ಕೊಳಚೆ (ಕಾರ್ಮಿಕರು), ಸರಸಿ (ನಿರ್ಮಲ ಮನಸ್ಸು / ಹೃದಯ)ಗಳಿಂದ ಹುಟ್ಟಿರುವ ಕಾರಣ ಪದ್ಮಕ್ಕೂ ಸಂಪತ್ತಿಗೂ ನಿಕಟ ಸಂಬಂಧ. ಅಂತೆಯೇ ಆಧ್ಯಾತ್ಮಿಕ ಸಂಪತ್ತು ಕೂಡಾ ಪಂಕದಿಂದ (ಕಲ್ಮಶಯುಕ್ತ ಶರೀರದಿಂದ) ಉದ್ಭವ. ಇವುಗಳ ಪ್ರತೀಕವಾದ ಕೆಂದಾವರೆ ಲಕ್ಷ್ಮಿಗೆ ಅಚ್ಚುಮೆಚ್ಚು ಪದ್ಮ ಚಂಚಲ ಹಾಗೂ ಪರಿವರ್ತನಾಯುಕ್ತ ಸಂಪತ್ತು ಸ್ಥಿರವಾಗಿರದೆ ಸದಾ ದ್ರವಿತವಾಗಿರುವುದರಿಂದಲೇ ಲಕ್ಷ್ಮಿಯು ಪದ್ಮಾಸನೆ.

ಲಕ್ಷ್ಮಿಯು ಚಂಚಲತೆಯ (liquidity) ಪ್ರತೀಕ. ಸಂಪತ್ತು ತಾಪಜನಕ, ಶುದ್ಧೋದಕದ ಪುಣ್ಯಸ್ನಾನ ಕೋಶಾಧಿಕಾರಿಗೆ ತಾಪನಿವಾರಕವಾದುದರಿಂದ ಗಜದ್ವಯಗಳಿಂಡ ಸ್ನಾನ. ಸಂಪತ್ತಿನ ಥಳಕಿಗೆ ಮನಸೋತು ಸ್ವಾರ್ಥಿಗಳು ಸಂಪತ್ತನ್ನೇ ಲಕ್ಷ್ಮಿಯೆಂದು ಬಗೆದು ಅದರ ಪ್ರಾಪ್ತಿಗಾಗಿ ನಿರರ್ಥಕ ಪೂಜೆ ಸಲ್ಲಿಸುತ್ತಾರೆ. ಸ್ವಾರ್ಥಪರತೆಯಿಂದ ಅಧಿಕಾರ ದಾಹದಿಂದ ಭೋಗಲಾಲಸೆಯಿಂದ ಓಲೈಸುವ ಡಾಂಬಿಕ ಜನರ ಪ್ರತೀಕವೇ ಗಜರಾಜದ್ವಯ.

ಲಕ್ಷ್ಮಿಯ ಅರ್ಥಗರ್ಭಿತ ಧ್ಯಾನ ಶ್ಲೋಕವೊಂದು ಇಂತಿದೆ :

**ವಂದೇ ಲಕ್ಷ್ಮೀಂ ಪರಶಿವಮಯೀಂ ಶುದ್ಧ ಜಾಂಬೂನದಾಭಾಂ ।**
**ತೇಜೋರೂಪಾಂ ಕನಕವಸನಾಂ ಸರ್ವಭೂಷೋಜ್ವಲಾಂಗೀಂ ॥**
**ಬೀಜಾಪೂರಂ ಕನಕ ಕಲಶಂ ಹೇಮಪದ್ಮಂ ದಧಾನಾಂ ॥**
**ಆದ್ಯಾ ಶಕ್ತಿಂ ಸಕಲ ಜನನೀಂ ವಿಷ್ಣುವಾಮಾಂಕ ಸಂಸ್ಥಾಂ ॥**

ಲಕ್ಷ್ಮಿಯು ಪರಶಿವಮಯಿ. ಅಂದರೆ ಸರ್ವೋತ್ಕೃಷ್ಟ ಶುಭಕರಳಾಗಿರುವಳು. ಶುದ್ಧ ಬಂಗಾರದಂತೆ ತೇಜೋರೂಪಳು. ಬಟ್ಟೆಯೂ ಬಂಗಾರದ್ದು. ಸಕಲ ಭೂಷಣ ಭೂಷಿತೆಯಾಗಿ ಉಜ್ವಲ ಸೌಂದರ್ಯದಿಂದ ಶೋಭಿತೆ. ಜಗತ್ತಿನ ಸಾರವತ್ತತೆಯನ್ನು ಸಾರುವ ಬೀಜಾಪೂರ, ಹಾಗೂ ಸಂಪದ್ಭರಿತ ಕನಕ ಕಲಶ, ಕನಕ ಕಮಲಗಳ ಧಾರಿಣಿ

ಎಲ್ಲದಕ್ಕಿಂತ ಮುಖ್ಯವಾಗಿ ಜಗತ್ತಿನ ಎಲ್ಲಾ ವ್ಯಾಪಾರಗಳಿಗೂ ಮೂಲಶಕ್ತಿಯಾಗಿ ಸಂಪತ್ಕರ ವ್ಯವಹಾರಗಳನ್ನು ಸೃಷ್ಟಿಸುವ ಜನನಿ. ಇಂತಹ ಲಕ್ಷ್ಮಿಯು ವಿಶ್ವಪಾಲಕ ವಿಷ್ಣುವಿನ ಎಡಭಾಗದಲ್ಲಿದ್ದು ವಿಶ್ವಪತಿಯು ಕೈಗೊಳ್ಳುವ ಪರಿಪಾಲನಾ ಕಾರ್ಯಕ್ಕೆ ಸದಾ ಸಂಪನ್ಮೂಲಗಳನ್ನೊದಗಿಸುವವಳು.

ಲಕ್ಷ್ಮಿಯನ್ನು ಸಂಪತ್ಕರಳಾಗಿ, ಸಂಪತ್ಸ್ವರೂಪಿಣಿಯಾಗಿ, ಸಂಪತ್ತಿನ ಅಧಿದೇವತೆಯಾಗಿ, ಸಂಪತ್ತನ್ನೊದಗಿಸುವ ವಿಶ್ವಜನನಿಯಾಗಿ, ಇಂದಿನ ಜಗತ್ತಿನ ಅತಿ ಉನ್ನತಮಟ್ಟದ ಕೋಶಾಧಿಕಾರಿಯಂತೆ ಕಲ್ಪಿಸಿರುವುದು ನಮ್ಮ ಪ್ರಾಚೀನ ದೃಷ್ಟಾರರ ಅದ್ಭುತ ಪರಿಕಲ್ಪನಾ ಶಕ್ತಿಗೆ ಚಿರಂತನ ನಿದರ್ಶನ.

★



# ಶಕ್ತಿಸ್ವರೂಪಿಣಿ ದುರ್ಗಾದೇವಿ

ಬ್ರಹ್ಮಾಂಡದ ಚರಾಚರ ವಸ್ತುಗಳಲ್ಲಿ ಚೇತನವನ್ನು ತುಂಬಿ ಸಮಗ್ರ ಜೀವನಾಧಾರವಾಗಿರುವ ದುರ್ಗಾದೇವಿಯು ಆದಿಶಕ್ತಿ. ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಿಗೆ ಕಾರಣಳಾದ ಪರಾಶಕ್ತಿ. ಜೀವರಾಶಿಯಲ್ಲಿ ಸಂಕಲ್ಪ ಶಕ್ತಿ, ಇಚ್ಛಾಶಕ್ತಿ , ಕ್ರಿಯಾಶಕ್ತಿ, ಮೇಧಾಶಕ್ತಿ ಸೃಜನಶಕ್ತಿಯಾಗಿ ಅಂತರಂಗದಲ್ಲಿ ಆತ್ಮಶಕ್ತಿಯಾಗಿ ಯೋಗಶಕ್ತಿಯಿಂದ ಸಚ್ಚಿದಾನಂದವನ್ನೀಯುವ ಪರಬ್ರಹ್ಮ ಸ್ವರೂಪಿಯಾಗಿ ಸರ್ವಶಕ್ತಿಗಳ ಉತ್ತುಂಗ ಪ್ರಾಯಳಾದ ದೇವಿಯು ದುರ್ಗಾ ಅಂದರೆ ಅತಿ ಎತ್ತರದವಳೆನಿಸುತ್ತಾಳೆ.

ಚತುರ್ಮುಖ ಬ್ರಹ್ಮನಿಗೆ ಸೃಜನ ಕಾರ್ಯದಲ್ಲಿ ಸರಸ್ವತಿಯಾಗಿ, ವಿಶ್ವಪಾಲಕ ವಿಷ್ಣುವಿಗೆ ಸೌಭಾಗ್ಯದಾಯಿನಿ ಲಕ್ಷ್ಮಿಯಾಗಿ, ಶಂಕರನಿಗೆ ಲಯಕಾರ್ಯದಲ್ಲಿ ಭದ್ರಕಾಳಿಯಾಗಿ, ಪುರುಷನಿಗೆ ಸ್ತ್ರೀ ಶಕ್ತಿಯಾಗಿ, ಸಮಸ್ತ ವಿಶ್ವದ ಜೀವಿಗಳಿಗೆ ಮಾತೃ ಸ್ವರೂಪಳಾದ ದೇವಿಯು ಜಗನ್ಮಾತೆ, ಜಗದ್ಧಾತ್ರಿ. ನವಶಕ್ತಿಯಾಗಿ, ನವದುರ್ಗೆಯಾಗಿ, ನವಚೇತನದಾಯನಿಯಾಗಿ, ಆಸುರೀ ಶಕ್ತಿಯ ವಿಧ್ವಂಸಿನಿಯಾಗಿ ಸರ್ವಮಂಗಳ ಮಾಂಗಲ್ಯೆಯಾದ ದೇವಿಯು ಶಂಕರಿ, ಶಾಂಭವಿ, ವರಾಭಯ ದಾಯಿನಿ, ಸರ್ವಭಯ ನಿವಾರಿಣಿ, ಶರಣಾಗತದೀನಾರ್ತ ಪರಿತ್ರಾಣ ಪರಾಯಣಿ. ಸೂರ್ಯಚಂದ್ರಾಗ್ನಿ ತ್ರಿನಯನೆಯಾಗಿ ಬಾಹ್ಯಾಂತರಿಕ ಕ್ರಿಯೆಗಳಿಗೆ ಸಾಕ್ಷಿ ಸ್ವರೂಪಿಣಿ. ಶಶಿ ಶೇಖರೆಯಾಗಿ ತನ್ನ ತಲೆಯನ್ನು ಸದಾ ತಂಪಾಗಿರಿಸಿಕೊಂಡು ತನಗೆ ಶರಣಾಗತರಾದವರ ಮನಸ್ಸನ್ನು ಶೀತಲಗೊಳಿಸುವ ಚೇತೋಹಾರಿಣಿ. ಸೌಮ್ಯಾತಿ ಸೌಮ್ಯಳಾಗಿ ಅತಿ ಸುಂದರಿಯಾಗಿರುವ ದೇವಿಯು ವಿಶ್ವ ಕಲ್ಯಾಣಿ. ಪ್ರಾಣಿಗಳಲ್ಲಿರುವ ಸಕಲ ರೀತಿಯ ಕ್ಷುಧಾ ಬಾಧೆಗಳನ್ನು ನಿವಾರಿಸುವ ಅನ್ನಪೂರ್ಣೇಶ್ವರಿ ಪರಾತ್ಪರ ಜ್ಞಾನಸ್ವರೂಪಿಣಿ. ದೇವೀ ಪರವಾಗಿರುವ ಧ್ಯಾನ ಶ್ಲೋಕಗಳು, ಮೂಲ ಮಂತ್ರಗಳು, ಸ್ತೋತ್ರಗಳು, ಪುರಾಣಗಳು, ಅಸಂಖ್ಯಾತ ಪರಿಕಲ್ಪಿಸಿದ ಮೂರ್ತಿ ಸ್ವರೂಪಗಳು ಸಹಸ್ರಾರು. ಸಪ್ತಶತೀ, ದೇವೀ ಭಾಗವತ,

ಮಾರ್ಕಂಡೇಯ ಪುರಾಣಗಳು ದೇವೀ ಸ್ವರೂಪಗಳ, ದೇವೀ ಮಹಾತ್ಮೆಯ ದೇವಿಯ ಗುಣಗಣಗಳನ್ನು ವಿವರಿಸುವ ಅಗಾಧ ನಿಧಿಯಾಗಿವೆ. ಅಮೋಘ ಸ್ತೋತ್ರ ರತ್ನಾಕರವಾಗಿವೆ. ದೇವೀ ಸಪ್ತಶತೀ ಗ್ರಂಥದ ಮೂರ್ತಿ ರಹಸ್ಯದಲ್ಲಿ ವರ್ಣಿತವಾಗಿರುವ ದೇವಿಯ ನಾಲ್ಕು ಪ್ರಮುಖ ಮೂರ್ತಿ ಸ್ವರೂಪಗಳು - ನಂದಾ, ರಕ್ತದಂತಿಕಾ, ಶಾಕಂಭರೀ ಮತ್ತು ಭ್ರಾಮರೀ.

ನಂದಾದೇವಿಯು ಕನಕ ಕಾಂತಿಯುತೆ ಸುವರ್ಣ ವರ್ಣದ ಮೈಕಾಂತಿಯುಳ್ಳವಳು. ಸುವರ್ಣ ವಸ್ತ್ರಾಭರಣ ಭೂಷಿಣಿ. ಇಂದಿರಾ, ಕಮಲಾ, ಲಕ್ಷ್ಮೀ, ಶ್ರೀ, ರುಕ್ಮಾಂಬುಜಾಸನಾ ಎಂದು ಕರೆಯಲ್ಪಡುವವಳಾಗಿ ಪಾಶ, ಅಂಕುಶ, ಶಂಖ, ಪದ್ಮಗಳಧಾರಿಣಿ. ಸಂಘಟನೆ, ಸಂಯಮ, ಉತ್ಸಾಹಪೂರ್ಣ ಕಾರ್ಯತತ್ಪರತೆ, ಸಮೃದ್ಧಿ ಸಮೋಲ್ಲಾಸಗಳ ಸಂಕೇತವೇ ಈ ನಾಲ್ಕು ಕರಾಯುಧಗಳು. ಸುವರ್ಣ ಕಾಂತಿಮಯಿಯಾಗಿ ನಯನ ಮನೋಹರಿಯಾದ ತ್ರಿಪುರ ಸುಂದರಿಯು ಭಕ್ತಜನ ಸಮ್ಮೋಹಿನಿ

ರಕ್ತದಂತಿಕಾ ನಂದಾದೇವಿಯ ತದ್ವಿರುದ್ಧ . ಕೆಂಪು ಬಣ್ಣದ ದೇಹ, ಕಣ್ಣು, ಕೂದಲು, ಉಗುರು, ಹಲ್ಲುಗಳಿಂದ ಕೂಡಿದ ರಕ್ತವರ್ಣೆಯಾಗಿ, ಶತ್ರುಗಳಿಗೆ ಭಯಂಕರಳಾಗಿ ಕಾಣುತ್ತಾಳೆ. ಖಡ್ಗ, ಪಾನಪಾತ್ರೆ, ಒನಕೆ, ನೇಗಿಲುಗಳೇ ಇವಳಿಗೆ ಆಯುಧಗಳು. ಇವುಗಳು ರೈತರ ಪ್ರಾತಿನಿಧಿಕ ಸಂಕೇತ. ಭೂಮಿಯಂತೆ ವಿಶಾಲವಾಗಿರುವ ಇವಳಿಗೆ ಸುಮೇರು ಪರ್ವತದಂತಿರುವ ಸ್ತನದ್ವಯಗಳು ಕಠಿಣವಾಗಿದ್ದರೂ ಸುಂದರವಾಗಿ ಭಕ್ತರ ಕಾಮನೆಗಳನ್ನು ಈಡೇರಿಸಲು ಸಮರ್ಥವಾಗಿವೆ ರಕ್ತ ಚಾಮುಂಡಾ, ಯೋಗೇಶ್ವರೀ ಎಂದು ಕರೆಯಲ್ಪಡುವ ಇವಳು ರೈತ ಸಮುದಾಯದ ಪ್ರತಿಕೃತಿ. ಕೆರಳಿದ ರೈತರ ಭಯಾನಕತೆಯನ್ನು ಬಿಂಬಿಸುವ ಸಂಕೇತ. ಒರಟಾಗಿ ಕಂಡರೂ ಉದಾರತೆ ತುಂಬಿರುವ ಮನೋಭಾವದ ಸಂಕೇತ. ತಾಂಬೂಲ ಚರ್ವಣದಿಂದ ಕೆಂಪಾದ ಹಲ್ಲುಗಳಿಂದ ಅಸಹ್ಯವೆನಿಸಿದರೂ ಅನುಪಮ ವಾತ್ಸಲ್ಯದಿಂದ ಕೂಡಿದ ಮಧುರ ಭಾವನೆಯ, ಹೃದಯಾನುರಾಗದ ಸಂಕೇತ.

ಶಾಕಂಭರಿಯು ನೀಲವರ್ಣ ಸ್ವರೂಪಳು. ನೀಲಿ ಶರೀರ, ನೀಲ ಕಮಲದಂತಹ ಕಣ್ಣುಗಳು, ಗಂಭೀರವಾಗಿ ತ್ರಿವಳಿಭೂಷಿತ ಉದರ, ಗೋಲಾಕಾರದ ಕಠಿಣ ಸ್ತನದ್ವಯಗಳು ಸರ್ವವ್ಯಾಪೀಸದಮಲತೆಯ ಸಂಕೇತ. ಕಮಲದಲ್ಲಿ ವಾಸವಾಗಿರುವ ಶಾಕಂಭರಿಯು ಕಮಲದ ಹೂ, ಬಾಣಗಳಿಂದ ತುಂಬಿದ ಮುಷ್ಟಿ, ಪ್ರಕಾಶಮಾನವಾದ

ಧನುಸ್ಸು , ಶಾಕ ಸಮೂಹಗಳನ್ನು ಧರಿಸಿರುವಳು. ಗುರಿ ತಲಪಲು ಸಾಧಕವಾದ ಸಾಯಕಗಳು, ತೇಜಃ ಪೂರ್ಣ ಶರಾಸನ, ನವೋಲ್ಲಾಸದಾಯಕ ಪಂಕಜಾತ ಸುಮ - ಕೊಳಚೆಯಲ್ಲಿ ಬೆಳೆದ ಸಮಾಜ ಹಿತ ಸಾಧಿಸುವ ಮುಗ್ಧಸುಂದರ ಸರಳ ಜೀವಿಗಳ ಸಂಕೇತ. ಶಾಕ ಸಮೂಹವು ಅನಂತ ಮನೋವಾಂಛಿತ ರಸಗಳಿಂದ ಕೂಡಿ ಹಸಿವು, ನೀರಡಿಕೆ ಹಾಗೂ ಜರಾವ್ಯಾಧಿ ಮೃತ್ಯು ಭಯಗಳನ್ನು  ನಿವಾರಿಸುವ ಶಕ್ತಿಶಾಲಿ ಸಾಧನಗಳಾಗಿದ್ದು ಹೂ, ತಳಿರು, ಕಂದಮೂಲಗಳಿಂದ ಕೂಡಿವೆ. ಇವುಗಳು ಪ್ರಕೃತಿ ಸಹಜ ಜೀವನ, ಪ್ರಕೃತಿಜನ್ಯ ವಸ್ತುಗಳ ಸಹಜಸೇವನೆ, ಸಸ್ಯಾಹಾರದ ಮಹತ್ವ ಮತ್ತು ಅಗತ್ಯವನ್ನು ಸಾರಿ ಹೇಳುವ ಸಂಕೇತ. ಶಾಕಂಭರೀ, ಶತಾಕ್ಷಿ, ದುರ್ಗಾ, ಕಾಮದಾ, ಕಾಲರಾತ್ರಿ, ಏಕವೀರಾ ಎಂದು ಕರೆಯಲ್ಪಡುವ ಈ ದೇವಿಯ ಹೆಸರುಗಳು ತುಂಬಾ ಅರ್ಥಗರ್ಭಿತ.

ಚಂದ್ರಹಾಸವೆಂಬ ಖಡ್ಗ, ಡಮರು, ಮಸ್ತಕ ಪಾನಪಾತ್ರೆಗಳನ್ನು ಧರಿಸಿರುವಳು ಇವುಗಳ ಮೂಲಕ ನಗೆಯೇ ಸಮರ್ಥ ಪ್ರಾಕೃತಿಕ ಚಿಕಿತ್ಸಾ ವಿಧಾನ, ಶಬ್ದವೇ ಜಾಗೃತಿಗೆ ಕಾರಣ, ಮಸ್ತಕವನ್ನು ಸ್ಥಿಮಿತದಲ್ಲಿಟ್ಟು ಕೊಳ್ಳುವುದೇ ಶ್ರೇಯಸ್ಸಿನ ಮೂಲ ಕಾರಣ. ಜಗತ್ತೇ ಪಾನಪಾತ್ರೆ, ಪ್ರಕೃತಿಯು ನೀಡುವ ಸುಮಧುರ ಸುಧಾರಸವೇ ಅಮೃತತ್ವಕ್ಕೆ ಕಾರಣವೆಂಬ ಸಂದೇಶವನ್ನು ದೇವಿಯು ಸಾರುತ್ತಾಳೆ.

ಭ್ರಾಮರೀ ದೇವಿಯು ಜಗತ್ತಿನ ಜೀವಿಗಳಿಗೆ ಭ್ರಮೆಯನ್ನು ಹುಟ್ಟಿಸುವಂತಿರುವಳು. ಚಿತ್ರವಿಚಿತ್ರ ವರ್ಣದ ಶರೀರ, ತೇಜೋಮಂಡಲ, ಸುಗಂಧ ಲೇಪನ, ವೈವಿಧ್ಯಮಯ ವಿಚಿತ್ರ ವಿಸ್ಮಯ ಅಲಂಕಾರಳಿಂದ ಭ್ರಾಮರಿ ದೇವಿಯು ಅಧುನಿಕ ಯುಗದ ಫ್ಯಾಷನ್ ಬೆಡಗಿಯರನ್ನು, ಬಣ್ಣದ ಚಿಟ್ಟೆಗಳಂತೆ ರಸಿಕರನ್ನಾಕರ್ಷಿಸುವ ಮಾದಕ ಚೆಲುವೆಯರನ್ನು ನೆನಪಿಸುವಂತೆ ಭಾಸವಾಗುತ್ತದೆ. ಚಿತ್ರ ಭ್ರಮರಪಾಣಿಯಾಗಿ ಚಿತ್ತವನ್ನು ಕಲಕುವಂತಿದೆ. ಸ್ಮೃತಿವಿಭ್ರಮಕ್ಕೆ ಮಹಾ ಮಾರಿಯಾಗಿರುವಳು.

ಈ ರೀತಿಯಾಗಿ ನಾಲ್ಕು ಮೂರ್ತಿ ರೂಪಗಳಿಂದ, ಅದ್ಭುತ ಸಂಕೇತಗಳ ಸಮೂಹವಾದ ದೇವಿಗೆ ಇಂತಹ ಸಹಸ್ರಾರು ಮೂರ್ತಿ ಸ್ವರೂಪಗಳಿವೆ.

ದೇವಿಯ ಸ್ವರೂಪವು ಸಂಕೀರ್ಣ, ವೈವಿಧ್ಯಮಯ, ವಿರೋಧಾಭಾಸಗಳಿಂದ ಕೂಡಿದರೂ ವಿಚಿತ್ರ ಸತ್ಯ. ನವರಸಜನ್ಯಭಾವಜನಕ. ಸ್ತ್ರೀ ಶಕ್ತಿಯ ವಿವಿಧ ಮುಖಗಳೇ ಮೂರ್ತಿವೆತ್ತಂತಿರುವ ದುರ್ಗಾದೇವಿಯು ಪರಮೇಶ್ವರಿ, ಜಗನ್ಮಾತೆ, ಕಾಮದಾ,

ಶರಣಾಗತ ರಕ್ಷಿಣಿ, ಭವಭಯ ನಿವಾರಿಣಿ, ಕಾಲಸ್ವರೂಪಿಣಿ. ಮಳೆಯನ್ನು ಸುರಿಸುವ ಕರಿ-ಮೋಡಗಳಂತಿರುವ ಭದ್ರಕಾಳಿ. ಸಮಸ್ತ ಜೀವಿಗಳಲ್ಲಿ ವಿವಿಧ ಭಾವಗಳ ರೂಪದಲ್ಲಿ ನೆಲಸಿರುವ ದುರ್ಗಾದೇವಿಯ ಅಪರಾಜಿತಾ ಸ್ತೋತ್ರವು ಹೃದಯಂಗಮ, ಅರ್ಥಗರ್ಭಿತ, ರೋಚಕ ಮತ್ತು ವಿಸ್ಮಯಕಾರಕ. ಯಾದೇವೀ ಸರ್ವಭೂತೇಷು ವಿಷ್ಣು ಮಾಯೇತಿ ಶಬ್ದಿತಾ ನಮಸ್ತಸ್ಯೈ.... ನಮೋನಮಃ ಎಂದು ಪ್ರಾರಂಭವಾಗುವ ಸ್ತೋತ್ರವು ದೇವಿಯು ಸರ್ವಭೂತಗಳಲ್ಲಿ ತುಷ್ಟಿ, ಕ್ಷಾಂತಿ, ಕ್ಷಮಾ, ದಯಾ, ಚೇತನ ಮೊದಲಾದ ಉದಾತ್ತ ಭಾವಗಳಾಗಿಯೂ ಕ್ರೋಧ, ಲಜ್ಜೆ, ಜಾತಿ, ಹಸಿವು, ಬಾಯಾರಿಕೆ, ಹೆದರಿಕೆಗಳ ರೂಪದಲ್ಲಿಯೂ ಅವಿರ್ಭಾವಳಾಗುತ್ತಾಳೆ. ಸರ್ವಭೂತರಾಶಿಯಲ್ಲಿರುವ ಈ ಗುಣಗಳನ್ನು ತೃಪ್ತಿಪಡಿಸಿದಾಗ ಜಗನ್ಮಾತೆಯೇ ತೃಪ್ತಳಾಗುತ್ತಾಳೆ ಎಂಬ ಸತ್ಯ ಸಂದೇಶ ಮನವರಿಕೆಯಾಗುತ್ತದೆ.

ದೇವಿಯು ಸೃಜನಶಕ್ತಿಯ ಅಕ್ಷಯ ಆಗರವಾದ ಕನ್ಯಾಕುಮಾರಿ. ಜಗತ್ತಿನ ರಕ್ಷಣೆ ಪಾಲನೆಯಲ್ಲೇ ಮಗ್ನಳಾಗಿರುವ ಕಾತ್ಯಾಯಿನಿ (ಅರ್ಧವೃದ್ಧಾ). ದೇವಿಯ ಧ್ಯಾನ ಶ್ಲೋಕಗಳಲ್ಲಿ ಸೂಚಿತವಾದ ಮಹಿಷಾಸುರ, ಮಧುಕೈಟಭ, ಧೂಮ್ರಲೋಚನ, ರಕ್ತ ಬೀಜ, ಶುಂಭ ನಿಶುಂಭ ಮೊದಲಾದ ರಾಕ್ಷಸರೂ, ಅನ್ವರ್ಥ ಸೂಚಕರಾಗುತ್ತಾರೆ ಮಹಿಷ ಜಡತೆ, ಅಲಕ್ಷ್ಯ, ಆಕ್ರಮಣ, ವಿದ್ವೇಷ, ಮದ ಮೋಹಗಳ ಸಂಕೇತ. ಇವುಗಳ ನಿವಾರಣೆಗೆ ಪ್ರಕೃತಿ ಸಹಜ ವನರಾಜನ ಬೆಂಬಲ ಅಗತ್ಯ. ಮದ್ಯಮಾಂಸಗಳ (ದ್ರವ, ಘನ ಪದಾರ್ಥಗಳು) ಪ್ರತೀಕವಾದ ಮಧು ಕೈಟಭರ ಸಂಹಾರದಿಂದಲೇ ಮೇದಿನಿಯನ್ನು ಸೃಷ್ಟಿಸಿದುದು ಭೂಮಿಯ ಹುಟ್ಟಿಗೆ ನೀಡಿದ ಅರ್ಥ ವಿವರಣೆ. ಹೊಗೆಯಿಂದ ಮಲಿನವಾಗಿ, ದೃಷ್ಟಿ ಮಬ್ಬಾಗಿ ವಿಕೃತ ದೃಷ್ಟಿಯಿಂದ ಜಗತ್ತನ್ನು ಭಾವಿಸಿ ಪ್ರಕೃತಿಯ ಸಮತೋಲನವನ್ನು ಹದಗೆಡಿಸುವ ವಿಕೃತ ಕಾಮಿಯೇ ಧೂಮ್ರಲೋಚನ. ರೋಗರುಜಿನಗಳು, ಅಲಕ್ಷ್ಯ, ಅನಿಯಂತ್ರಣಗಳಿಂದ ಅಪಘಾತ, ಆಕಸ್ಮಿಕಗಳ ಸಾಂಕ್ರಾಮಿಕ ಬಾಧೆಗಳ ಸೃಷ್ಟಿಕರ್ತನೇ ರಕ್ತಬೀಜಾಸುರ. ಇವನ ಮಿತಿಮೀರಿದ ಪ್ರಸರಣವನ್ನು ತಡೆಯಬೇಕಾದರೆ ದೇವಿಯು ತನ್ನ ನಾಲಿಗೆಯನ್ನು ಚಾಚಿ ವಿಷರಕ್ತವನ್ನು ಹೀರಿ ನಿವಾರಿಸಬೇಕಾಯಿತು. ಸ್ತ್ರೀ ದ್ವೇಷಿಗಳು, ಪರಸ್ತ್ರೀಕಾಮಿಗಳು, ಕಾಮಾಂಧರು, ಅನುಕೂಲ ಶಾಸ್ತ್ರ ಪರಿಣತರೇ ರಾಕ್ಷಸರು ಇವರ ಸಂಹಾರಕ್ಕೆ ದೇವಿಯು ನೂರಾರು ರೂಪಗಳನ್ನು ತಾಳಬೇಕಾಯಿತು. ಅವತಾರಗಳನ್ನು ಎತ್ತಬೇಕಾಯಿತು.

ಆಧ್ಯಾತ್ಮಿಕವಾಗಿಯೂ ದೇವಿಯ ಮೂರ್ತಿಯು ಮಹತ್ವಪೂರ್ಣವಾಗಿದೆ. ಸಮಸ್ತ ಜಗತ್ತಿನ ಹಿಂದಿರುವ ಚಿದಾನಂದ ಶಕ್ತಿಯೇ ಶಕ್ತಿ ತತ್ವ. ಮಾಯಾರೂಪದಲ್ಲಿ ಜೀವಿಗಳನ್ನು

ಮೋಹಪರವಶರನ್ನಾಗಿ ಮಾಡಿ, ಚಿಚ್ಛಕ್ತಿಯಾಗಿ ಜ್ಞಾನ ಜ್ಯೋತಿಯನ್ನು ಬೆಳಗಿಸಿ ಅಂತರಾತ್ಮನಿಗೆ ಸಚ್ಚಿದಾನಂದ ರೂಪದ ಸಂದರ್ಶನವನ್ನು ಮಾಡಿಸಿ ಮುಕ್ತಿ ನೀಡುವ ಸಚ್ಚಿದಾನಂದ ಸ್ವರೂಪಿಣಿಯೇ ಜ್ಞಾನದಾಯಿನಿ ದುರ್ಗಾದೇವಿ

ದೇವಿಯ ಮಹಾತ್ಮೆಯನ್ನು ಅನುಭವಿಸಿ ಆನಂದಿಸಿ ಸ್ತುತಿಸಿ ಧನ್ಯರಾದವರಲ್ಲಿ ಆದಿಶಂಕರಾಚಾರ್ಯರು ಅಗ್ರಗಣ್ಯರು. ಅವರ ಸೌಂದರ್ಯ ಲಹರಿ ಸರ್ವವೇದಾಂತದ ಸಾರವನ್ನು ಬೀರುವ ಅಮೋಘ ಕೃತಿ. ಅವರ ಇನ್ನಿತರ ಅಮರ ಕೃತಿಗಳು ನೂರಾರು. ಜ್ಞಾನ ಭಕ್ತಿ ವೈರಾಗ್ಯದೊಡನೆ ಮಾತೃವಾತ್ಸಲ್ಯ, ರೂಪಮಾಧುರ್ಯವನ್ನು ಉಣಬಡಿಸುವ ಅಮೃತಧಾರೆ. ಇವುಗಳಲ್ಲಿ ದೇವಿಯನ್ನು ಮಾತೃಸ್ವರೂಪದಲ್ಲಿ ಸ್ತುತಿಸಿರುವುದೇ ಹೆಚ್ಚು. ದೇವೀಮೂರ್ತಿಯ ಅದ್ಭುತ ಅರ್ಥ ವೈಶಾಲ್ಯ, ಗುಣವರ್ಣನೆ, ಮಹಾತ್ಮೆಯ ವಿವರಣೆ ಅತ್ಯದ್ಭುತ. ಅವರ ಸಿದ್ಧಾಂತದ ಪ್ರಕಾರ ಶಕ್ತಿಯಿಂದ ಕೂಡಿರದ ಶಿವನು ಅಶಕ್ತ , ಅಪ್ರಯೋಜಕ. ದೇವ ದೇವತೆಗಳು, ತ್ರಿಮೂರ್ತಿಗಳು ದೇವಿಯ ಕೃಪಾಮೃತಾಸ್ವಾದದಿಂದ ಸಬಲರಾಗಿ ತಮ್ಮ ಕ್ರಿಯೆಗಳನ್ನು ನಡೆಸುವವರು. ಆಸುರೀ ಶಕ್ತಿಯ ಸಂಹಾರಕ್ಕೆ ಸಮಸ್ತ ದೇವದೇವತೆಗಳು ತಮ್ಮ ಸರ್ವಶಕ್ತಿಯನ್ನು ಧಾರೆಯೆರೆದವರು. ದೇವಿಯು ತ್ರಿಪುರ ಸುಂದರಿ. ಶ್ರದ್ಧಾ ಬುದ್ಧಿ ವಾತ್ಸಲ್ಯಗಳಿಂದ ಕೂಡಿದ ತ್ರಿಶಕ್ತಿ ಸ್ವರೂಪಳು, ತ್ರಿಗುಣಾಕಾರಳಾದರೂ ತ್ರಿಗುಣಾತೀತಳು. ತ್ರಿಮೂರ್ತಿಗಳಿಗೂ ಮೀರಿದ ಮಹಾಮಾಯೆ. ಅವ್ಯಾಜಕರುಣಾ ಮೂರ್ತಿ. ಭಕ್ತಾಭೀಷ್ಟ ಫಲ ಪ್ರದಾಯಿನಿ, ದೇವೀಮೂರ್ತಿಯು ಪ್ರಕೃತಿ ಶಕ್ತಿಯ ಸಂಕೇತ. ಸ್ತ್ರೀ ಶಕ್ತಿಯ ಉತ್ತುಂಗ ಪ್ರಾಯವಾದ ಮಾತೃಶಕ್ತಿಯಾಗಿ ಜಗತ್ತಿನ ಜೀವಿಗಳ ಯೋಗ ಕ್ಷೇಮಗಳನ್ನು ವಹಿಸುವವಳು. ಪ್ರಾಕೃತಿಕ ಅಸಮತೋಲನವಾಗಿ ಸಹಜ ಕ್ರಿಯೆಗಳಿಗೆ ಬಾಧೆಯುಂಟಾದಾಗ ಆಂತಕಕಾರೀ ಆಸುರೀ ಶಕ್ತಿಯನ್ನು ನಿರ್ಮೂಲನಗೊಳಿಸಲು ಭಯಂಕರ ರೂಪಧಾರಿಣಿಯಾಗುತ್ತಾಳೆ. ಸಕಲ ಭೂತರಾಶಿಯಲ್ಲಿ ಸಹಜಭಾವ ಸ್ವರೂಪದಿಂದ ವರ್ತಿಸಿ ವಿಶ್ವದ ಆಗುಹೋಗುಗಳಿಗೆ ಕಾರಣಳಾಗುತ್ತಾಳೆ. ಸತ್ವ, ರಜ, ತಮ ಗುಣಗಳ ಸಾಧಕರಿಗೆ ಅನುಗುಣವಾಗಿ ಆವಿರ್ಭವಿಸಿ ಅಭೀಷ್ಟವನ್ನು ಈಡೇರಿಸುತ್ತಾಳೆ. ಸೃಜನ ಕ್ರಿಯೆಯಲ್ಲಿ ಪುರುಷನೊಡನೆ ಸಮ್ಮಿಲನವಾಗಿ ಪರಿಪಾಲನಾ ಕ್ರಿಯೆಯಲ್ಲಿ ಪೋಷಕಳಾಗಿ, ಯುಕ್ತಾ ಯುಕ್ತ ಜ್ಞಾನ ಕ್ರಿಯಾದಿಗಳಿಂದ ಲಯಕಾರ್ಯದ ಮೂಲಕವೂ ಲೋಕಕಲ್ಯಾಣಕಾರಕಳಾಗುತ್ತಾಳೆ. ದೇವೀಮೂರ್ತಿಯ ಮಹತ್ವಪೂರ್ಣ ಸಂಕೇತವನ್ನರಿತು ಆರಾಧಿಸುವ ನರರೇ ಧನ್ಯರು; ಕೃತಕೃತ್ಯರು, ಪುಣ್ಯವಂತರು.

★



# ಶಕ್ತಿ ಸೇನಾನಿ ಸುಬ್ರಹ್ಮಣ್ಯ

**ಸು**ಬ್ರಹ್ಮಣ್ಯ ಸ್ವಾಮಿಯು ವೇಲಾಯುಧ, ಬಾಲ ಮುರುಗ, ಕುಮಾರಸ್ವಾಮಿ, ದಂಡಪಾಣಿ, ನಾಗಸುಬ್ರಹ್ಮಣ್ಯ ಎಂಬಿತ್ಯಾದಿ ರೂಪಗಳಿಂದ ಆರಾಧಿಸಲ್ಪಡುತ್ತಾನೆ. ಸಿಂಧೂರಾರುಣ ವರ್ಣದವನಾಗಿ, ಇಂದು ಕೋಟಿ ಸದೃಶ ಕಾಂತಿ ವದನನಾಗಿ, ತ್ರಿನಯನನಾಗಿ, ಮಯೂರ ವಾಹನನಾಗಿರುವನು. ಕರ್ಣಾಲಂಬಿತ ಕುಂಡಲವು ಗಂಡಸ್ಥಳದಲ್ಲಿ ಶೋಭಿಸುತ್ತಿದ್ದು ಕಿಂಚಿತ್ ಕಿಂಕಿಣೀರವರಿಂದ ಶೃಂಗಾರ ಸಾರೋದಯನಾಗಿ ಸರ್ವಾಂಗ ಸುಂದರನಾಗಿರುವ ಶಾಂತರೂಪ ಒಂದಾದರೆ, ಪ್ರಜ್ವಲಿಸುವ ಜ್ವಾಲಾಮಾಲಾ ಸದೃಶ ತೇಜಸ್ಸು, ಸಾಹಸ, ಚೈತನ್ಯ, ಧೈರ್ಯ, ಸ್ಥೈರ್ಯಗಳಿಂದ ಕೂಡಿದ ದೇವಸೇನಾನಿಯ ರೂಪ ಇನ್ನೊಂದು. ಷಣ್ಮುಖ, ಷಾಣ್ಮಾತುರ, ದ್ವಾದಶಭುಜ, ದ್ವಾದಶ ಆಯುಧಗಳಿಂದ ಷೋಡಶ, ಅಷ್ಟಾದಶ, ಸಹಸ್ರ ನಾಮಗಳಿಂದ ಅರ್ಚಿಸಲ್ಪಡುವ ಸುಬ್ರಹ್ಮಣ್ಯನು ಅಧ್ಯಾತ್ಮದ ಅತ್ಯುನ್ನತ ಸ್ಥಿತಿಯ ಆನಂದದ ಸಂಕೇತ. ಸುಬ್ರಹ್ಮಣ್ಯ ಎಂಬ ಹೆಸರೇ ಸೂಚಿಸುವಂತೆ ಪರಬ್ರಹ್ಮದಲ್ಲಿ ಸುಸ್ಥಿತವಾಗಿ ನೆಲೆನಿಂತಿರುವ ಭಾವವೇ ಸುಬ್ರಹ್ಮಣ್ಯ.

ಸುಬ್ರಹ್ಮಣ್ಯನು ದೇವ ಸೇನಾನಿ. ಎಡಬಲದಲ್ಲಿ ದೇವಸೇನಾವಲ್ಲಿಯರನ್ನಿರಿಸಿ ಕೊಂಡಿರುವ ಅನುಪಮ ಶಕ್ತಿ ಸೇನಾನಿ. ವಲ್ಲಿಯು ಶ್ಯಾಮ ವರ್ಣದವಳಾಗಿ, ಗುಂಜಾಮಣಿ ಹಾರಗಳಿಂದ, ಹವಳಯುಕ್ತ ವಸನಾಲಂಕೃತಳಾಗಿ, ತೊಟ್ಟಿರುವ ಕಂಚುಕವನ್ನು ಬಿರಿಯಿಸುವ ದಷ್ಟ ಪುಷ್ಟ ಸ್ತನಗಳುಳ್ಳ ಪ್ರಾಕೃತ ಹೆಣ್ಣು. ನಿಸರ್ಗದತ್ತ ರಕ್ಷಕ ಬಲಗಳ ಕ್ರೋಢೀಕರಣದ ಪ್ರತೀಕ. ಶಚೀ-ಇಂದ್ರರ ತನುಜೆ ದೇವಸೇನಾ ಸುಸಜ್ಜಿತ, ಸುಸಂಸ್ಕೃತ ವೈಜ್ಞಾನಿಕ ಶಕ್ತಿ ಸೇನೆಯ ಪ್ರತೀಕ. ಇವೆರಡು ಸೇನೆಗಳ ಬಲದಿಂದ ದೇವಸೇನಾನಿಯು ತಾರಕಾಸುರ (ಹೈಟೆಕ್)ನೆಂಬ ಆಸುರೀ ಶಕ್ತಿಗಳ ಸಾಕಾರವಾದ ರಾಕ್ಷಸನ ನಾಶಕ್ಕಾಗಿ ನೆಲ ವಾಯು ದಳಗಳಿಂದ ಸುಸಜ್ಜಿತ. ಅಗತ್ಯವೆನಿಸಿದರೆ ಕ್ರೌಂಚ ಪರ್ವತವನ್ನೇ ಕೊರೆದು ಆಳವಡಿಸಿಕೊಂಡು ಅರಿನಾಶನ ಕಾರ್ಯವನ್ನು ಮಾಡುವ ದಕ್ಷಸೇನಾನಿ.

ನಿಸರ್ಗ ಸುಂದರ ಮೇರುತುಲ್ಯ ಮಯೂರ ಇವನ ವಾಹನ. ಪರಿಸರ ಸಂರಕ್ಷಣೆಯ ನಿರ್ವಹಣೆಯನ್ನು ಮಾಡುತ್ತಿರುವ ಸರ್ಪ ಸಂಕುಲಗಳ ಪ್ರತಿನಿಧಿಯಾದ ನಾಗಸರ್ಪ ಇವನಿಗೆ ಶರಣಾಗತ. ಮೂರನೆಯ ನಯನದ ಮೂಲಕ ಜಗದ ಹಿತಾಹಿತ, ನ್ಯಾಯಾನ್ಯಾಯ, ಧರ್ಮಾ ಧರ್ಮ ವಿವೇಚನೆಯಿಂದ ಲೋಕಮಾರಕ ಆಸುರೀಶಕ್ತಿಯ ಸಮೂಲನಾಶಕ್ಕೆ ಬದ್ಧಕಂಕಣನಾಗಿ ಲೋಕಕಲ್ಯಾಣ ದರ್ಶನ ಹೊಂದಿದ ಮಹಾಜ್ಞಾನಿ ಸೇನಾನಿಯೇ ಸುಬ್ರಹ್ಮಣ್ಯ.

ಲೋಕ ಕಲ್ಯಾಣಕ್ಕಾಗಿ ಶಂಕರನು ನಿರ್ವಹಿಸುತ್ತಿರುವ ಸಂಹಾರ ಕಾರ್ಯದಲ್ಲಿ ಸಮಭಾಗಿ ಈ ಶಿವಸುತ ಸ್ಕಂದ. ಸುಬ್ರಹ್ಮಣ್ಯನು ಶಕ್ತಿಧರ, ಶಕ್ತ್ಯಾಯುಧಧರ, ತ್ರಿಕರಣ ಶಕ್ತಿಸಾಗರ. ಇಚ್ಛಾಶಕ್ತಿ, ಕ್ರಿಯಾಶಕ್ತಿ, ಮೇಧಾಶಕ್ತಿಗಳ ಯೋಗಕಾರಕ ಅಮರ ಬ್ರಹ್ಮಚಾರಿ ಕುಮಾರಸ್ವಾಮಿಯಾಗಿ ಸೃಜನ ಶಕ್ತಿಯ ಅಕ್ಷಯ ಆಗರ.

**ಸುಬ್ರಹ್ಮಣ್ಯನು ದ್ವೈಮಾತುರ:** ಗಂಗಾಸುತ. ಕೃತ್ತಿಕಾ ದೇವಿಯರ (ಆರುಮಂದಿ) ಸ್ತನ್ಯಪಾನ ಮಾಡಿದ ಷಾಣ್ಮಾತುರ. ಆರು ದಿಕ್ಕುಗಳಿಂದ ಬರುವ ಅರಿಷಡ್ವರ್ಗಗಳೇ ಮೊದಲಾದ ದುಷ್ಟ ಶಕ್ತಿಗಳ ದಾಳಿಯೆನ್ನೆದುರಿಸಲು ದ್ವಾದಶ ಆಯುಧಗಳಿಂದ ಸುಸನ್ನದ್ಧ. ಸುಬ್ರಹ್ಮಣ್ಯನ ಒಂದು ಅರ್ಥಗರ್ಭಿತ ಧ್ಯಾನಶ್ಲೋಕ ಇಂತಿದೆ :

**ಷಡ್ವಕ್ತ್ರಂ ಶಿಖಿವಾಹನಂ ತ್ರಿನಯನಂ ಚಿತ್ರಾಂಬರಾಲಂಕೃತಂ ।**
**ಶಕ್ತಿಂವಜ್ರಮಸಿ ತ್ರಿಶೂಲಮಭಯಂ ಖೇಟಂ ಧನುಂ ಸ್ವಸ್ತಿಕಂ (ಚಕ್ರಕಮ್) ।**
**ಪಾಶಂ ಕುಕ್ಕುಟಮಂಕುಶಂ ಚ ವರದಂ ಹಸ್ತೈರ್ದಧಾನಂ ಸದಾ ।**
**ಧ್ಯಾಯೇದೀಪ್ಸಿತ ಸಿದ್ಧಿದಂ ಶಿವಸುತಂ ಸ್ಕಂದಂ ಸುರಾರಾಧಿತಮ್ ॥**

ಈ ಶ್ಲೋಕದಂತೆ ಸುಬ್ರಹ್ಮಣ್ಯನ ಆಯುಧಗಳು :

★ ನಿರ್ದಿಷ್ಟ ಗುರಿಯನ್ನು ಸಾಧಿಸಲು ಸಮರ್ಥವಾದ ಶಕ್ತ್ಯಾಯುಧ
★ ಎಂತಹ ಕಠಿಣ ಪರಿಸ್ಥಿತಿಯನ್ನೂ ಎದುರಿಸಬಲ್ಲ ವಜ್ರಾಯುಧ
★ ಅನಪೇಕ್ಷಿತ ಅಂಶಗಳನ್ನು ತರಿದು ತೆಗೆಯಬಲ್ಲ ಅಸಿ
★ ತ್ರಿವಿಧ ಬಾಧೆಗಳನ್ನು ನಿವಾರಿಸಬಲ್ಲ ತ್ರಿಶೂಲ
★ ಶರಣಾಗತ ದೀನಾರ್ತರಿಗೆ ಸಂರಕ್ಷಣೆ ನೀಡುವ ಅಭಯ

★ ಶತ್ರು ಶಕ್ತಿಯನ್ನು ನಿರ್ನಾಮಗೊಳಿಸುವ ಖೇಟ
★ ಮಂತ್ರಾಸ್ತ್ರ ಪ್ರಯೋಗಕ್ಕೆ ಆಧಾರವಾಗಿರುವ ಧನಸ್ಸು
★ ಪ್ರಗತಿ ಪಥವನ್ನು ತೋರುವ ಸ್ವಸ್ತಿಕ (ಅಥವಾ ಚಕ್ರ)
★ ಇಚ್ಛಾಶಕ್ತಿಯನ್ನು ಏಕತ್ರೀಕರಿಸಿ ಸಕಲ ಇಷ್ಟಾರ್ಥವನ್ನು ಪೂರೈಸುವಪಾಶ
★ ಎಚ್ಚರಿಕೆಯ ಸಂಕೇತವಾದ ಕುಕ್ಕುಟಾಯುಧ
★ ವಿವೇಚನೆಯಿಂದ ತಡೆಹಿಡಿಯುವ ಅಂಕುಶ
★ ಆರಾಧಕನ ಅಭೀಷ್ಟಗಳನ್ನು ಅನುಗ್ರಹಿಸುವ ವರದ

ಮೇಲಿನ ಆಯುಧಗಳು ಎಷ್ಟೊಂದು ಅರ್ಥಪೂರ್ಣ! ಸಾಧಕರಿಗೆ ಸಾಂಕೇತಿಕವಾಗಿ ಎಷ್ಟೊಂದು ಮಹತ್ವಪೂರ್ಣ!! ಸುಬ್ರಹ್ಮಣ್ಯ ಶಕ್ತಿ ಸ್ವಭಾವ, ಮಹತ್ವಗಳನ್ನು ಸೂಚಿಸುವ ಷೋಡಶ ನಾಮಗಳೂ ಅರ್ಥಗರ್ಭಿತ. ಮೊದಲ ಹೆಸರೇ ಜ್ಞಾನಶಕ್ತಿ. ಅತ್ಯಂತ ಭರವಸೆ ತಾಳಬಹುದಾದ ಬಲವೇ 'ಸ್ಕಂದ' ಅಗ್ನಿಯು ಅಂತರಂಗದಲ್ಲಿ ನಿರಂತರವಾಗಿ ಪ್ರಜ್ವಲಿಸುತ್ತಿದ್ದು ಸಕಲ ಶಕ್ತಿಗಳ ಉತ್ಪನ್ನ ಹಾಗೂ ಜಾಡ್ಯಾಂಧಕಾರದ ಧ್ವಂಸಕನೇ ಅಗ್ನಿಗರ್ಭ. ಉಚ್ಚಮಟ್ಟದ ಆಸುರೀ ಶಕ್ತಿಗಳಿಗೆ ಶತ್ರುವೇ 'ತಾರಕಾರಿ'. ಗುಹೆಯಂತೆ ನಿಗೂಢವಾಗಿದ್ದು ಆಳ ಹರವು ಉದ್ದಗಳನ್ನೆಳೆಯಲು ಅಸಾಧ್ಯವಾಗಿರುವವನೇ 'ಗುಹ' ಈಶ್ವರನ ಕಲ್ಯಾಣ ಕಾರ್ಯಕ್ಕೆ ಕಸುವನ್ನು ನೀಡುವವನೇ 'ಶಿವತೇಜ'. ಸದಾ ಪರಬ್ರಹ್ಮದಲ್ಲಿ ರತನಾಗಿ ಬ್ರಹ್ಮಾನಂದರತನಾದ ಬ್ರಹ್ಮಜ್ಞಾನಿ'ಬ್ರಹ್ಮಚಾರಿ'.

ವಿವಿಧ ಮಹತ್ವಪೂರ್ಣನಾಮ, ರೂಪ, ಆಯುಧ, ಶಕ್ತಿ, ಸಾಮರ್ಥ್ಯ ಸಂಗಾತಿಗಳನ್ನು ಕಲ್ಪಿಸಲಾಗಿರುವ ಶಿವಸುತನು ಶೃಂಗಾರ ಸಾರೋದಯ. ಸಮರ್ಥಸೇನಾನಿ. ಲೋಕ ಶಂಕರ ಶಿವಸುತ. ಸಚ್ಚಿದಾನಂದ ರೂಪೀ ಸುಬ್ರಹ್ಮಣ್ಯ.

★

# ಪ್ರಸನ್ನ ವದನ ವಿಶ್ವಂಭರ



ಜಗತ್ತಿನ ವ್ಯಾಪಾರವೆಲ್ಲವೂ ಕರ್ತೃ-ಭೋಕ್ತೃಗಳೆಂಬ ಎರಡು ತತ್ವಗಳ ಮೇಲೆ ನಡೆಯುತ್ತಿವೆ. ಕರ್ಮಫಲವನನ್ನುಭವಿಸುವವನೇ ಭೋಕ್ತೃ. ಕರ್ತೃವಿನ ಸಕಲಕರ್ಮಗಳೂ ಜ್ಞಾತಾಜ್ಞಾತ ಭೋಕ್ತೃವಿನ ಇಚ್ಛೆಯನ್ನು ಪೂರೈಸುವ ಪ್ರಕ್ರಿಯೆ. ಇಚ್ಛೆಯನ್ನು ಪರಿಣಾಮಕಾರಿಯಾಗಿ ಪೂರೈಸುವುದೇ ಪ್ರಕ್ರಿಯೆಗಳ ಏಕೈಕ ಕಾರಣ. ಪ್ರಕ್ರಿಯೆಗಳಲ್ಲಿ ಪ್ರಭೇದಗಳಿದ್ದರೂ ಅಂತಿಮ ಉದ್ದೇಶ ಇಚ್ಛಾಪೂರೈಕೆ. ಪ್ರಕ್ರಿಯೆಯಲ್ಲಿ ಎದುರಾಗುವ ಎಡರುತೊಡರುಗಳು, ಅಡ್ಡಿ-ಆಡಚಣೆಗಳು, ಆತಂಕ - ಕಾತರತೆಗಳು ವೈವಿಧ್ಯಮಯ, ಸಂಕೀರ್ಣ. ಕರ್ತೃವಿನ ಅಧೀರತೆಗೆ ಕಾರಣವಾಗಿ ಕಾರ್ಯವಿಧಾನಗಳನ್ನು ಅಸ್ತವ್ಯಸ್ತಗೊಳಿಸಿ ಪ್ರಕ್ರಿಯೆಗಳನ್ನು ಕುಂಠಿತಗೊಳಿಸಿ, ತಟಸ್ಥ ಸ್ಥಿತಿಗೆ ತರಲು ಕಾರಣವಾಗುತ್ತವೆ. ಈ ಸನ್ನಿವೇಶದಲ್ಲಿ ಛಲವನ್ನು ಬಿಡದೆ, ಸಾಧನೆಯನ್ನು ನಿಲ್ಲಿಸದೆ, ಅಡಚಣೆಗಳಿಂದ ಎದೆಗೆಡದೆ, ಮುನ್ನುಗ್ಗಿ ನಿಶ್ಚಿತ ಗುರಿ ಸೇರಿ ಕಾರಣವನ್ನು ಸಫಲಗೊಳಿಸುವವನೇ ಧೀರ ಪರಾಕ್ರಮಿ, ಸಾಹಸಿ, ಶೂರ.

ಈ ವಿಚಾರವನ್ನು ವ್ಯಾವಹಾರಿಕ ವಿದ್ಯಮಾನಗಳಿಗೆ ಅನ್ವಯಿಸುವುದಾದರೆ ಮಾನವ ಸಮುದಾಯವು ನಡೆಸುವ ಎಲ್ಲಾ ಪ್ರಕ್ರಿಯೆಗಳೂ ಸಾಧನೆಯ ಸಿದ್ಧಿಗಾಗಿ. ಕ್ಷಿಪ್ರ ಫಲಕ್ಕಾಗಿ, ಸಂತೃಪ್ತಿಗಾಗಿ, ಪ್ರಸನ್ನ ಚಿತ್ತಕ್ಕಾಗಿ. ವೈಯಕ್ತಿಕ, ಸಾಂಸಾರಿಕ, ಸಾಮಾಜಿಕ, ಲೌಕಿಕ ಹಾಗೂ ಪಾರಮಾರ್ಥಿಕ ಪ್ರಕ್ರಿಯೆಗಳೆಲ್ಲವೂ ಉದ್ದೇಶಿತ ಅನುಭವಿಯನ್ನು ಗುರಿಯಾಗಿ ಉಳ್ಳದ್ದಾಗಿರುತ್ತವೆ. ಉಪಾಧ್ಯಾಯರಿಗೆ ಶಿಷ್ಯರು, ವೈದ್ಯರಿಗೆ ರೋಗಿಗಳು, ಹೆತ್ತವರಿಗೆ ಮಕ್ಕಳು, ಉತ್ಪಾದಕರಿಗೆ ಗ್ರಾಹಕರು, ಸರಕಾರಕ್ಕೆ ಪ್ರಜೆಗಳು, ಕರ್ತೃ-ಭೋಕ್ತೃ ಸಂಬಂಧವುಳ್ಳವರಾಗಿರುತ್ತಾರೆ. ಭೋಕ್ತೃವಿಗೆ ತೃಪ್ತಿ ನೀಡಿ ಅವನು ಅನುಭವಿಸುವ ಆನಂದವನ್ನು ತನ್ನದನ್ನಾಗಿ ಭಾವಿಸಿ ಕೃತಕೃತ್ಯಭಾವದಿಂದ ಧನ್ಯತೆಯನ್ನು ಅನುಭವಿಸುವುದೇ ಪ್ರತಿಯೊಬ್ಬ ಕರ್ತೃವಿನ ಅಂತಿಮ ಉದ್ದೇಶ

ಪ್ರಕ್ರಿಯೆಯು ನಿರ್ವಿಘ್ನವಾಗಿ ನೆರವೇರಿ ಫಲಪ್ರದವಾಗಲು, ಕ್ಷಿಪ್ರ ಪ್ರಸಾದವನ್ನೀಯುವ ವಿಶ್ವಂಭರ ಮೂರ್ತಿಯನ್ನು ಆರಾಧಿಸುವ ವಿಧಾನ

ಮಾಧ್ವಸಂಪ್ರದಾಯದಲ್ಲಿದೆ. ಇದು ಬಹಳ ಅರ್ಥಪೂರ್ಣವಾಗಿದೆ. ವಿಶ್ವಂಭರ ಮೂರ್ತಿಯನ್ನು ಸ್ತುತಿಸುವ ಶ್ಲೋಕವೊಂದು ಇಂತಿದೆ.

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।**
**ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪ ಶಾಂತಯೇ ॥**

ಪ್ರಕ್ರಿಯೆ - ಪರಿಣಾಮ ವಿಶ್ವವ್ಯಾಪಿಯಾದುದು. ಜೀವನದ ಪ್ರತಿಕ್ಷಣವೂ ನಡೆಯುವಂತದ್ದು . ಪ್ರಕ್ರಿಯೆಯು ನಿರೀಕ್ಷಿತ ಮತ್ತು ಅಪೇಕ್ಷಿತ ಫಲವನ್ನಿತ್ತಾಗ ಉಂಟಾಗುವ ಕರ್ತೃ-ಭೋಕ್ತೃಗಳ ಪ್ರಸನ್ನ ವದನವೇ ಪ್ರಕ್ರಿಯೆಯ ಪರಮ ಉದ್ದೇಶ. ಈ ಪ್ರಸನ್ನವದನವನ್ನು ಮನಸ್ಸಲ್ಲಿ ಚಿಂತಿಸಿ ಧ್ಯಾನಿಸಿದಾಗ ಪ್ರಕ್ರಿಯೆಯಲ್ಲಿ ಎದುರಾಗುವ ವಿಘ್ನಗಳೆಲ್ಲವೂ ಉಪಶಾಂತವಾಗುವುದು ಎಂಬುದೇ ಈ ಶ್ಲೋಕದ ಸಾರಾಂಶ. ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಉತ್ತೀರ್ಣನಾದಾಗ ಮೂಡಿಬರುವ ಪ್ರಸನ್ನ ವದನ, ಸ್ಪರ್ಧಿಯು ವಿಜೇತನಾದಾಗ ಕಂಡುಬರುವ, ಪ್ರಸನ್ನವದನ, ತಾಯಿಯು ಮಗುವಿನ ಏಳಿಗೆಯಲ್ಲಿ ತಾಳುವ ಪ್ರಸನ್ನ ಭಾವ, ಗ್ರಾಹಕನು ತೃಪ್ತನಾದಾಗ ಮೂಡಿಬರುವ ಪ್ರಸನ್ನ ಚಿತ್ತ, ಕಲಾವಿದನು ಜನಮನವನ್ನು ರಂಜಿಸಿದಾಗ ಉಂಟಾಗುವ ಪ್ರಸನ್ನ ಭಾವ ಮೊದಲಾದವುಗಳು ಇದಕ್ಕೆ ನಿದರ್ಶನಗಳು. ಈ ಪ್ರಸನ್ನ ವದನಗಳ ಸ್ಮರಣೆಯೇ ಸಾಧಕನಿಗೆ ಎದುರಾಗುವ ವಿಘ್ನಬಾಧೆಗಳ ಉಪಶಮನಕ್ಕೆ ಮೂಲ ಸಾಧನ. ಗರ್ಭಿಣಿಯು ಮುಂದೆ ಹುಟ್ಟಲಿರುವ ಮುದ್ದು ಕಂದನನ್ನು ನೆನೆದಾಗ, ಉತ್ಪಾದಕನು ಗ್ರಾಹಕನ ಸಂತೃಪ್ತಿಯನ್ನು ನೆನೆದಾಗ ಎದುರಾಗುವ ಅಡೆ-ತಡೆ-ಸಂಕಟಗಳು ಮರೆಯುವಂತಾಗುತ್ತದೆ. ಇದೇ ರೀತಿ ಯಾವುದೇ ಪ್ರಕ್ರಿಯೆಯಲ್ಲಿ ವಿಘ್ನಗಳು ಎದುರಾದಾಗ ಮುಂದೆ ಲಭ್ಯವಾಗಲಿರುವ ಆನಂದದ ಚಿಂತನೆ ವಿಘ್ನಗಳನ್ನು ಸಹಿಸುವ ಮನಃ ಸ್ಥೈರ್ಯವನ್ನು ನೀಡಿ, ಪ್ರಕ್ರಿಯೆಯು ಸುಗಮವಾಗಿ, ಸಾಧನೆಯು ಸುಲಭ ಸಾಧ್ಯವಾಗುವಂತೆ ಮಾಡುತ್ತದೆ.

ಮೇಲಿನ ಶ್ಲೋಕದ ಮಹತ್ವಕ್ಕೆ ಲೌಕಿಕ ಉದಾಹರಣೆಯನ್ನು ಈ ರೀತಿ ನೀಡಬಹುದಾಗಿದೆ. ಗ್ರಾಹಕನು ವಿಶ್ವಂಭರ ರೂಪದಲ್ಲಿ ಉತ್ಪಾದಕನಿಗೆ ಪ್ರಸನ್ನವದನನಾಗಿ ಎದುರಾಗುತ್ತಾನೆ. ಅಂದರೆ ಜಗತ್ತೆಲ್ಲವೂ ಗ್ರಾಹಕರಿಂದ ತುಂಬಿದೆ. ಪ್ರತಿಯೊಬ್ಬ ಜೀವಿಯೂ ಒಂದಲ್ಲ ಒಂದು ರೀತಿಯಿಂದ ಗ್ರಾಹಕ. ಆದುದರಿಂದ ಈ ಜಗತ್ತೇ ವಿಶ್ವಂಭರ ರೂಪಿ ಪರಮಾತ್ಮನ ಸ್ವರೂಪ. ವಿಶ್ವಂಭರನು ಶುಕ್ಲಾಂಬರ. ಅಂದರೆ, ಧವಳ ಚಿತ್ತದ ಸಂಕೇತ. ಕಿಂಚಿತ್ ಕಳಂಕವೂ ಇಲ್ಲದ ಶುಭ್ರ ಹಿನ್ನೆಲೆಯುಳ್ಳವ. ಸಂತೃಪ್ತನಾದಾಗ

ಸಂಪತ್ತು ನೀಡಿ ಉದ್ಧರಿಸುವ ಅಹ್ಲಾದಕರ ಶಶಿವರ್ಣ ಚತುರೋಪಾಯಗಳಿಂದ ಕೂಡಿದ ವ್ಯವಹಾರ ಚತುರ ಎರಡು ಕೈಗಳಿಂದ ಸಾದರವಾಗಿ ಸ್ವೀಕರಿಸಿ ಇನ್ನೆರಡು ಕೈಗಳಿಂದ ಉದಾರವಾಗಿ ನೀಡುವ ಚತುರ್ಭುಜಧಾರಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಈಡೇರಿಸುವ ಸರ್ವೇಶ್ವರ. ಪ್ರಗತಿ ಸೂಚಕ 'ಸುದರ್ಶನ' ಚಕ್ರ, ಜಾಗೃತಿ ಕಾರಕ ಶಂಖ, ಅರಿಷ್ಟದಮನಕಾರೀ ಗದೆ, ಸಂಪತ್ಸಮೃದ್ಧಿಕರ ಪದ್ಮಗಳನ್ನು ಧರಿಸಿರುವ ಪುರುಷೋತ್ತಮ. ಚೌಕಟ್ಟಿ (ಚತುರ್ಭುಜ) ನೊಳಗೆ ಕಾರ್ಯನಿರ್ವಹಿಸುವ ದಕ್ಷ ಅಧೀಕ್ಷಕ. ಸತ್ಯಸಂಧತೆ, ಪ್ರಾಮಾಣಿಕತೆ, ಶ್ರದ್ಧೆ, ನಿಷ್ಠೆ, ಶಿಸ್ತುಗಳಿಂದ ಉತ್ತಮ ಗುಣಮಟ್ಟದ ಸೇವೆಯಿಂದ ಪ್ರಸನ್ನನಾಗುವ ಗ್ರಾಹಕ ಉತ್ಪಾದಕನ ಇಷ್ಟಾರ್ಥವನ್ನು ಪೂರೈಸುವ ಕಾಮಧೇನು

ಈ ಪ್ರಪಂಚವು ಕರ್ತೃ-ಕಾರ್ಯ-ಕಾರಣಗಳೆಂಬ ತ್ರಿವಿಧ ತತ್ವಗಳನ್ನೊಳಗೊಂಡ ಸೃಜನಶೀಲ ಸೇವಾ ಕ್ಷೇತ್ರ ವ್ಯಾವಹಾರಿಕ ವಿಘ್ನಗಳ ಉಪಶಮನಕ್ಕಾಗಿ ಗ್ರಾಹಕನ ಪ್ರಸನ್ನವದನವನ್ನು ಸ್ಮರಿಸಿದಾಗ ಮಾತ್ರ ವಿಘ್ನಗಳ ಉಪಶಮನ ಪ್ರಸನ್ನವದನಂ ಧ್ಯಾಯೇತ್ ಎಂಬುದು ಪ್ರತಿಯೊಬ್ಬ ಉತ್ಪಾದಕನ ಮೂಲಮಂತ್ರವಾದಾಗ ಮಾತ್ರ ಗ್ರಾಹಕನ ಪ್ರಸನ್ನವದನವನ್ನು ನಿರಂತರ ಕಾಪಾಡುವುದು ಸಾಧ್ಯ. ಇದು ಸಕಲ ಪ್ರಕ್ರಿಯೆಗಳ ಮೂಲೋದ್ದೇಶವಾದಾಗ ಮಾತ್ರ ವಿಶ್ವಂಭರನು ಪ್ರಸನ್ನ ವದನನಾಗಿ ಸಕಲ ಇಷ್ಟಾರ್ಥಗಳನ್ನು ಅನುಗ್ರಹಿಸುವನು. ಈ ರೀತಿಯಾಗಿ ಈ ಶ್ಲೋಕದ ವಿಚಾರ ಎಂದೆಂದೂ ಪ್ರಸ್ತುತ, ಸಾರ್ಥಕ, ಮಾರ್ಗದರ್ಶಕ





# ಅಧ್ಯಾತ್ಮ ಸಾಧಕ ಅಯ್ಯಪ್ಪಸ್ವಾಮಿ

ಧರ್ಮಶಾಸ್ತಾ, ಹರಿಹರಪುತ್ರ, ಮಣಿಕಂಠ, ಶಬರೀಶ ಮೊದಲಾದ ಹೆಸರಿನಿಂದ ಆರಾಧಿಸಲ್ಪಡುವ ಅಯ್ಯಪ್ಪಸ್ವಾಮಿಯು ತನ್ನ ಅಸಂಖ್ಯಾತ ಭಕ್ತರಲ್ಲಿ ಆಧ್ಯಾತ್ಮಿಕ ಗುಣಗಳನ್ನು ಒಡಮೂಡಿಸುವ ಪ್ರಭಾವಶಾಲಿ ದೇವತೆ ಇವನ ಭಜಕರಲ್ಲಿ ಕಂಡು ಬರುವ ಸರಳತೆ, ಸಹಜತೆ, ಸಮತಾಭಾವ, ಸಹಿಷ್ಣುತೆ, ಇಂದ್ರಿಯ ನಿಗ್ರಹ ಮೊದಲಾದ ಸದ್ಗುಣಗಳ ಪ್ರೇರಣಾಮೂಲವೇ ಅಯ್ಯಪ್ಪಸ್ವಾಮಿ. ಮನಮೋಹಕ ಸುಂದರ ವದನದಲ್ಲಿ ಮಂದಹಾಸವನ್ನು ಸೂಸಿ, ಯೋಗಬಂಧದಿಂದ ಸದೃಢನಾಗಿ, ಚಿನ್ಮುದ್ರೆಯಿಂದ ಸಚ್ಚಿದಾನಂದವನ್ನು ಹೊಂದುವ ಅಧ್ಯಾತ್ಮಗುಣ ಪ್ರಚೋದಕನೇ ಶಬರಿಮಲೆ ನಿವಾಸಿ ಅಯ್ಯಪ್ಪಸ್ವಾಮಿ. ನೇಮನಿಯಮಗಳಿಂದ ವ್ರತನಿಷ್ಠರಾದ ಅಸಂಖ್ಯಾತ ಭಕ್ತವಾಹಿನಿಯನ್ನು ತನ್ನೆಡೆಗೆ ಸದಾ ಆಕರ್ಷಿಸುವ ಆರಾಧ್ಯ ದೇವನೇ ಅಯ್ಯಪ್ಪ ಸ್ವಾಮಿಯ. ಇವನ ಭಕ್ತರು ಅನುಸರಿಸುವ ಕಠಿಣ ವ್ರತಾಚರಣೆಯ ವಿವಿಧ ಮುಖಗಳನ್ನು ಪರಿಶೀಲಿಸಿ, ವಿಶ್ಲೇಷಿಸಿದಾಗಲೇ ಅಯ್ಯಪ್ಪಸ್ವಾಮಿಯ ಅಧ್ಯಾತ್ಮ ಸಂದೇಶಗಳ ಅರಿವಾಗುವುದು.

ಕಡಿದಾದ ಸುಮಾರು ಎಂಟು ಮೈಲು ದೂರದ ದುರ್ಗಮ ದಾರಿಯನ್ನು ಬರಿಕಾಲಿನ ನಡಿಗೆಯಲ್ಲಿ ಕಡ್ಡಾಯವಾಗಿ ಕ್ರಮಿಸುವುದು ವ್ರತದ ಒಂದು ಮುಖ. ಕಲ್ಲುಮುಳ್ಳು ಚಳಿ-ಮಳೆ, ಗಾಳಿ-ಬಿಸಿಲು ಮೊದಲಾದ ಪ್ರಾಕೃತಿಕ ಪ್ರತಿಕೂಲ ಪರಿಸ್ಥಿತಿಯನ್ನು ಕಡೆಗಣಿಸಿ ಪ್ರಕೃತಿ ಪರಿಸರಗಳೊಂದಿಗೆ ಒಂದಾಗಿ ಸ್ವಾಮಿಯ ಸನ್ನಿಧಿಗೆ ತಲಪುವ ಭಕ್ತರ ಸಂಭ್ರಮ, ನಿಷ್ಠೆ ಅದ್ಭುತ, ವಿಸ್ಮಯ. ಅಧ್ಯಾತ್ಮ ಉನ್ನತಿಗೆ ಪ್ರಕೃತಿಯೊಂದಿಗೆ ಸಹಜವಾಗಿ ಸ್ಪಂದಿಸುವುದೇ ಮೊದಲನೆ ಪಾಠ. ಇದು ಸ್ವಾಮಿಯ ಪ್ರಮುಖ ಸಂದೇಶ.

ಬ್ರಹ್ಮಚರ್ಯ, ಚಳಿಕಾಲದಲ್ಲೂ ತಣ್ಣೀರಿನ ಸ್ನಾನ, ಬರಿಗಾಲ ನಡಿಗೆ, ಸಾತ್ವಿಕ ಆಹಾರ ವಿಹಾರ, ನಡೆ-ನುಡಿ ದುರ್ವ್ಯಸನಗಳಿಂದ ದೂರವಿರುವಿಕೆ, ದೈವ ಚಿಂತನೆ

ಮೊದಲಾದ ಕಠಿಣ ನಿಯಮಗಳನ್ನು ಸ್ವಯಂಪ್ರೇರಿತವಾಗಿ, ಸ್ವಯಂಶಿಸ್ತಿನಿಂದ ಪರಿಪಾಲಿಸುವುದು ಕಷ್ಟಸಹಿಷ್ಣುತೆ ಮತ್ತು ಇಂದ್ರಿಯ ನಿಗ್ರಹಗಳಿಗೆ ದೃಷ್ಟಾಂತ

ಕರಿ ಅಥವಾ ಕೇಸರಿ ಬಣ್ಣದ ಅತ್ಯಂತ ಸರಳ ಉಡುಗೆ-ತೊಡುಗೆ, ಹಿತಮಿತವಾದ ಆಹಾರ-ವಿಹಾರ, ಪರಿಶುದ್ಧ ಆಚಾರ-ವಿಚಾರ, ಕ್ಷೌರರಹಿತ ಆಕರ್ಷಕ ಮುಖ, ಸದಾ ಸ್ವಾಮಿಯೇ ಶರಣಂ ಎನ್ನುವ ಸಂಪೂರ್ಣ ಶರಣಾಗತ ಸಮರ್ಪಣಾ ಭಾವ ಅಯ್ಯಪ್ಪನ ಆರಾಧಕರ ಮುಖ್ಯ ಲಕ್ಷಣಗಳು

ಅಯ್ಯಪ್ಪನ ಸೇವಾವ್ರತಿಗಳಿಗೆ ಸಮಾನತಾಭಾವ ಸಹಜಗುಣ. ಸೇವಾವ್ರತಿಗಳೆಲ್ಲರೂ ಸಮಾನರು. ಜಾತಿಭೇದವಿಲ್ಲ, ವಯಸ್ಸಿನ ಅಂತರವಿಲ್ಲ, ಆರ್ಥಿಕಸ್ಥಿತಿಯ ತಾರತಮ್ಯವಿಲ್ಲ, ಮತಧರ್ಮಗಳ ಭಿನ್ನತೆಯಿಲ್ಲ, ಬಾಷಾವೈಷಮ್ಯವಿಲ್ಲ ಪ್ರತಿಯೊಬ್ಬ ಭಕ್ತನಲ್ಲಿಯೂ ಅಯ್ಯಪ್ಪ ಸ್ವಾಮಿಯನ್ನು (ಚಿಕ್ಕ ವಯಸ್ಸಿನವರಲ್ಲಿ ಮಣಿಕಂಠಕುಮಾರನನ್ನು) ಕಾಣುವ ಮನೋಧರ್ಮ. ಇಲ್ಲಿ ಸೇವಾವ್ರತಿಯ ಲೌಕಿಕ ಮತ್ತು ದೈಹಿಕ ಉಪಾಧಿ ಮತ್ತು ನಾಮರೂಪ ಗೌಣ ಸೇವಾ ಭಾವ, ಸಹಾಯ ಶೀಲತೆ, ಸದಾಚಾರ, ಸಹೃದಯತೆ ಮೊದಲಾದ ಮಾನಸಿಕ ಗುಣಗಳು ಸೇವಾವ್ರತಿಯ ನಡೆನುಡಿಗಳಲ್ಲಿ ಎದ್ದು ಕಾಣುವ ಅಂಶಗಳು.

ಮಾಲಾಧಾರಣೆಯಿಂದ ಮೊದಲ್ಗೊಂಡು ಯಾತ್ರೆ ಪೂರೈಸುವವರೆಗೆ ಸೇವಾವ್ರತಿಯ ಶಯ್ಯಾ ಶಯನ ವರ್ಜನ, ಬ್ರಹ್ಮಚರ್ಯ, ಶುದ್ಧ ಸಾತ್ವಿಕ ಸಸ್ಯಾಹಾರ ಸೇವನೆ, ಪವಿತ್ರ ವಿಚಾರಗಳ ಚಿಂತನಗಳಿಂದ ಕೂಡಿದ್ದು ಸ್ವಯಂ ಪ್ರೇರಿತ ಶಿಸ್ತು ಪಾಲನೆಯಿಂದ ದುರ್ವ್ಯಸನ, ದುರ್ಗುಣ, ದುರ್ಭಾವ, ದುರಹಂಕಾರಗಳಿಂದ ದೂರವಿದ್ದು ಅಧ್ಯಾತ್ಮವಿದ್ಯೆಯ ಸಾಧಕನಾಗುತ್ತಾನೆ.

ವೃಶ್ಚಿಕ ಸಂಕ್ರಮಣದಿಂದ ಮಕರ ಸಂಕ್ರಮಣದ ಅವಧಿಯಲ್ಲಿ ದೇಶದ ವಿವಿಧ ಮೂಲೆಗಳಿಂದ ಅಯ್ಯಪ್ಪಸ್ವಾಮಿಯ ಸಮವಸ್ತ್ರ ವೇಷಭೂಷಣಧಾರಿಗಳಾಗಿ, 'ಸ್ವಾಮಿಯೇ ಶರಣಂ' ಎಂಬ ತಾರಕಮಂತ್ರ ಘೋಷದೊಂದಿಗೆ ಶಬರಿಮಲೆಗೆ ಹರಿದು ಬರುವ ಲಕ್ಷೋಪಲಕ್ಷ ಸೇವಾವ್ರತಿಗಳ ವಾಹಿನಿಯು ಲೌಕಿಕ ಜಗತ್ತಿನ ಅದ್ಭುತ ವಿಸ್ಮಯ, ಆಧ್ಯಾತ್ಮಿಕ ಕಂಪನವನ್ನುಂಟುಮಾಡುವ ದೈವೀ ಸನ್ನಿವೇಶ. ದಿವ್ಯಚೈತನ್ಯವನ್ನು ಜಾಗೃತಗೊಳಿಸುವ ಪವಿತ್ರಪರಿಸರ.

ಅಯ್ಯಪ್ಪಸ್ವಾಮಿಯ ಜನ್ಮ ವೃತ್ತಾಂತವೂ ವಿಚಿತ್ರ, ವಿಸ್ಮಯ, ಮನಮೋಹಕ ವಿಷ್ಣು ಮತ್ತು ಶುಭಕರ ಶಂಭು ಇವರ ಪವಿತ್ರ ಸಮಾಗಮದಿಂದ ಉದ್ಭವಿಸಿದವನೇ ಹರಿಹರ ಪುತ್ರ ಧರ್ಮಶಾಸ್ತ್ರ; ಪರಿಪಾಲನಾಕರ್ತೃ ಹರಿ ಮತ್ತು ಸಂಹಾರಕರ್ತೃ ಹರ ತತ್ವಗಳ ಸಂಗಮ ಶಕ್ತಿಯೇ ಅಯ್ಯಪ್ಪ. ಮಾನವೀಯ ಮೌಲ್ಯಗಳ ಸಾಕಾರ ಮೂರ್ತಿಯಾಗಿ, ಸದ್ಭಾವ, ಸದ್ಗುಣ, ಸಹೃದಯತೆಗಳನ್ನು ಪೋಷಿಸುವ ಅಯ್ಯಪ್ಪಸ್ವಾಮಿಯು ಭಕ್ತರಲ್ಲಿರುವ ಅರಿ ಷಡ್ವರ್ಗ ಮತ್ತು ಆಸುರೀ ಭೋಗ ಲಾಲಸೆಗಳನ್ನು ಸಂಹರಿಸಿ ಸ್ವಯಂಶಿಸ್ತಿನಿಂದ ಧರ್ಮರಕ್ಷಣೆಯನ್ನು ಪ್ರಚೋದಿಸುವ ಸ್ವಾಮಿಯೇ ಧರ್ಮಶಾಸ್ತಾ, ಅಧ್ಯಾತ್ಮ ವಿದ್ಯೆಯಲ್ಲಿ ಮಹತ್ವಪೂರ್ಣ ಸಂಖ್ಯೆಯಾದ ಹದಿನೆಂಟರ ಮಹತ್ವವನ್ನು ಮನವರಿಕೆ ಮಾಡಿಕೊಡಲು ಮತ್ತು ಹದಿನೆಂಟು ತತ್ವಗಳ ಅನುಷ್ಠಾನದ ಪ್ರಾಮುಖ್ಯವನ್ನು ಸಾರುವುದಕ್ಕೋಸ್ಕರ ಹದಿನೆಂಟು ಪಡಿ (ಮೆಟ್ಟಲು)ಗಳನ್ನು ಯಾತ್ರೆ ಪೂರ್ಣ ಫಲಪ್ರದವಾದಾಗ ಬೇಕಾದರೆ ಒಂದೊಂದಾಗಿ ಹತ್ತಿ ಹೋಗಲೇಬೇಕೆಂಬ ನಿಯಮವಿದೆ. ಇದು ಸೇವಾವ್ರತಿಯು ಆಧ್ಯಾತ್ಮಿಕ ಉನ್ನತಿಗೇರಲು ಪಾಲಿಸಬೇಕಾದ ಹದಿನೆಂಟು ತತ್ವಗಳ ಸಂಕೇತ. ಹದಿನೆಂಟರ ತಾತ್ವಿಕ ಮಹತ್ವವನ್ನು ಅರಿತು, ಅನುಷ್ಠಾನದಿಂದ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲು ಬೋಧಿಸುವ ಆಧ್ಯಾತ್ಮಿಕ ಗುರುವೇ ಅಯ್ಯಪ್ಪ ಸ್ವಾಮಿ

ಮಾನವೀಯ ಮೌಲ್ಯಗಳು ಮತ್ತು ದೈವಿಕ ವಿಚಾರಗಳಿಂದ ಕೂಡಿದ ಒಂದು ದಿವ್ಯ ಆಧ್ಯಾತ್ಮಿಕ ಲೋಕವನ್ನು ಸೃಷ್ಟಿಸುವ ಅಯ್ಯಪ್ಪಸ್ವಾಮಿಯು ಜಗದ ಜನಮನದ ನಾಯಕ ಅಲೌಕಿಕ ಆತ್ಮಾನಂದ ತತ್ವಗಳ ಸಾಕಾರ ಮೂರ್ತಿ. ಆತ್ಮೋನ್ನತಿಯನ್ನು ಸಾಧಿಸಬಯಸುವವರಿಗೆ ಸನ್ಮಾರ್ಗ ದರ್ಶಕ ಪರಿಸರ ಪ್ರೇಮವನ್ನು ಪ್ರಚೋದಿಸುವ ಪ್ರಭಾವಪೂರ್ಣ ಪವಿತ್ರ ಪ್ರವರ್ತಕ.





# ಪರಿವರ್ತನೆಯ ಪ್ರತೀಕ ಸಂಧ್ಯಾದೇವಿ

ಪ್ರಕೃತಿಯಲ್ಲಿ ಪರಿವರ್ತನೆ ಅಪರಿಹಾರ್ಯ ಅನಿವಾರ್ಯ ವಸ್ತುಸ್ಥಿತಿ ಪ್ರಾಜ್ಞನು ಈ ನಿತ್ಯಸತ್ಯ ಪರಿಸ್ಥಿತಿಗೆ ಪರಿಣಾಮಕಾರಿಯಾಗಿ ಸ್ಪಂದಿಸಿ, ಎದುರಿಸಿ ಪರಿವರ್ತನೆಯ ಪ್ರಯೋಜನವನ್ನು ಪಡೆಯುತ್ತಾನೆ. ಪರಿವರ್ತನೆಯು ಅನವರತವಾಗಿ ಐಚ್ಛಿಕ ಮತ್ತು ಅನೈಚ್ಛಿಕವಾಗಿ ಆಗುತ್ತಿದ್ದರೂ ಸಂಧಿಕಾಲದಲ್ಲಿ ಇದರ ಬಗ್ಗೆ ಹೆಚ್ಚಿನ ಜಾಗರೂಕತೆ ವಹಿಸುವುದು ಅತ್ಯಗತ್ಯ ಹುಟ್ಟು, ಬೆಳವಣಿಗೆ, ಸಾವು ಇವು ಮೂರು ಜೀವನ ಚಕ್ರದ ಸಂಧಿ ಬಿಂದುಗಳು. ಜೀವನದಲ್ಲಿ ಬದಲಾವಣೆ ಸದಾ ನಡೆಯುತ್ತಿದ್ದರೂ ಯಾವುದೇ ಕ್ಷಣದಲ್ಲಿ ಬದಲಾವಣೆ ಬಿಂದು (Turning Point) ಸಂಭವಿಸಬಹುದು. ಇದು ಜೀವನ ಚಕ್ರದ ಪಥವನ್ನೇ ಅನಿರೀಕ್ಷಿತ ದಿಕ್ಕಿಗೆ ಒಯ್ದು ಅಘಟಿತ ಘಟನಾವಳಿಗಳಿಗೆ ಕಾರಣವಾಗುವುದು. ಈ ಬದಲಾವಣಾ ಬಿಂದುಗಳಲ್ಲಿ ಪ್ರತಿಕ್ರಿಯಿಸಬೇಕಾದ ರೀತಿ, ಮಾನಸಿಕ ಸಿದ್ಧತೆ, ಕೈಗೊಳ್ಳಬೇಕಾದ ಕರ್ತವ್ಯಗಳ ಅರ್ಥಪೂರ್ಣ ಪರಿಜ್ಞಾನವೇ ಸಂಧ್ಯಾವಂದನೆಯ ಸಂದೇಶ

**ಯಾಂ ಸದಾ ಸರ್ವ ಭೂತಾನಿ ಸ್ಥಾವರಾಣಿ ಚರಾಣಿ ಚ।**
**ಸಾಯಂ ಪ್ರಾತರ್ನಮಸ್ಯಂತಿ । ಸಾಮಾಂ ಸಂಧ್ಯಾಭಿರಕ್ಷತು ॥**

ಎಂಬುದು ಅರ್ಥಗರ್ಭಿತ ವಂದನಾ ಶ್ಲೋಕ. ಇದು ಧ್ಯಾನಯೋಗ್ಯ ಶ್ಲೋಕವೂ ಹೌದು ಪ್ರಾತಃ ಕಾಲವು ಅಜ್ಞಾನಸ್ಥಿತಿಯಿಂದ ಜಾಗೃತ ಸ್ಥಿತಿಗೆ ಬರುವ ಪರಿವರ್ತನಾ ಬಿಂದು ತಮಸ್ಸಿನಿಂದ ಜ್ಯೋತಿಯೆಡೆಗೆ, ಗರ್ಭಾವಸ್ಥೆಯಿಂದ ಜಗತ್ತಿಗೆ, ಅಜ್ಞಾನದಿಂದ ಜ್ಞಾನಕ್ಕೆ ಸಂಕ್ರಮಿಸುವ ಕಾಲ. ಮಧ್ಯಾಹ್ನ ಸಂಧ್ಯೆಯು ಉಚ್ಛ್ರಾಯ ಸ್ಥಿತಿಯಿಂದ ಅವನತಿಗೆ, ಪ್ರಖರತೆಯಿಂದ ಶಾಂತತೆಗೆ ಪರಿಕ್ರಮಿಸುವ ಪರಿವರ್ತನಾಬಿಂದು ಸಾಯಂ ಸಂಧ್ಯೆಯು ಜ್ಞಾತದಿಂದ ಅಜ್ಞಾತಕ್ಕೆ, ಜೀವನದಿಂದ ಮರಣಕ್ಕೆ, ಬೆಳಕಿನಿಂದ ಕತ್ತಲೆಗೆ ಸಂಕ್ರಮಿಸುವ ಪ್ರಮುಖ ಬಿಂದು ಈ ಮೂರು ಸನ್ನಿವೇಶಗಳಲ್ಲಿ ಮಾನವ ಎದುರಿಸಬೇಕಾದ

ಅನಿವಾರ್ಯ ಪರಿಸ್ಥಿತಿ, ಅನಿರ್ದಿಷ್ಟ ವಸ್ತುಸ್ಥಿತಿ, ಪರಿಸ್ಥಿತಿಯನ್ನು ಪ್ರಯೋಜನಕರವಾಗಿ ಪರಿವರ್ತಿಸುವ ಛಾತಿ ಇವುಗಳ ಬಗ್ಗೆ ಸಮರ್ಪಕ ಸೂಚನೆ, ಸಲಹೆ, ಮಾರ್ಗದರ್ಶನ, ಎಚ್ಚರಿಕೆಗಳೇ ಸಂಧ್ಯಾವಂದನೆಯ ಪ್ರಾಯೋಗಿಕ ಮಹತ್ವ

ಸಂಧ್ಯಾವಂದನೆಯಲ್ಲಿ ಸ್ನಾನ, ಆಚಮನ, ಪ್ರಾಣಾಯಾಮ, ಧ್ಯಾನ, ಜಪ, ದಿಙ್ನಮಸ್ಕಾರ, ಸರ್ವಸಮರ್ಪಣಗಳು ಪ್ರಮುಖ ಆಚರಣೀಯ ಅಂಶಗಳು.

ಬಾಹ್ಯ ಶುದ್ಧತೆ ಮತ್ತು ಸಿದ್ಧತೆಗೆ ಮಂತ್ರೋಚ್ಚಾರ ಪೂರ್ವಕ ಸ್ನಾನಾಭ್ಯಂಜನಗಳು ವಿದಿತವಾಗಿವೆ. ಇದು ಆರೋಗ್ಯವರ್ಧನೆಯ ಮೂಲಸೂತ್ರ. ಪ್ರಕೃತಿಯ ಪವಿತ್ರ ಪಂಚಭೂತಗಳಿಗೆ ಸ್ಪಂದಿಸಿ ತನ್ಮಯವಾಗುವ ಪ್ರಕ್ರಿಯೆಯೇ ಸ್ನಾನ. ಗಂಗಾದಿ ಪವಿತ್ರ ನದಿಗಳನ್ನು ಆಹ್ವಾನಿಸಿ, ಪ್ರಣವೋಚ್ಚಾರಣಾ ಪೂರ್ವಕವಾಗಿ ಗಾಯತ್ರೀ ಮೊದಲಾದ ಮಂತ್ರಾರ್ಘ್ಯಗಳನ್ನು ನೀಡಿ, ಬ್ರಹ್ಮಾಂಡದ ಸಕಲ ಚರಾಚರ ವಸ್ತುಗಳನ್ನು ಶರೀರದಲ್ಲಿ ಆಹ್ವಾನಿಸಿ, ಆವಾಹಿಸಿ, ಬ್ರಾಹ್ಮೀ ಭಾವವನ್ನು ಹೊಂದುವುದೇ ಮಂತ್ರಸ್ನಾನದ ಉದ್ದೇಶ ಸರ್ವವ್ಯಾಪಿಯಾದ ವಿಷ್ಣುತತ್ವವನ್ನು ಅರಿತು, ಉಚ್ಚರಿಸಿ, ಬಾಹ್ಯ ಮತ್ತು ಅಂತರಂಗ ಶುದ್ಧಿಯನ್ನು ಸಾಧಿಸುವ ಪ್ರಕ್ರಿಯೆಯೇ ಸ್ನಾನ

ದ್ವಾದಶ ನಾಮಗಳನ್ನು ಅಥವಾ ಚತುರ್ವೇದಗಳನ್ನು, ಇಂದ್ರಾದಿ ದಿಕ್ಪಾಲಕರನ್ನು, ಸ್ಮರಿಸಿ ನಿರ್ದಿಷ್ಟ ಪ್ರಮಾಣದ ಜಲಸೇವನೆ, ಅಂಗಸ್ಪರ್ಶಗಳಿಂದ ತನ್ನ ದೇಹದ ದಶೇಂದ್ರಿಯಗಳನ್ನು ಪವಿತ್ರಗೊಳಿಸಿ, ಕಾರ್ಯಸಿದ್ಧಿಗೆ ಸಮರ್ಥ ಸಾಧನಗಳನ್ನಾಗಿ ಪರಿವರ್ತಿಸುವುದಕ್ಕಾಗಿಯೇ ಆಚಮನ ವಿದಿತವಾಗಿದೆ.

ತನ್ನಲ್ಲಿರುವ ಪಂಚಪ್ರಾಣಗಳ ಸಾಮರ್ಥ್ಯವನ್ನು ಮನವರಿತು, ಪ್ರಾಣ ಶಕ್ತಿಯನ್ನು ಉದ್ದೀಪನಗೊಳಿಸಿ ಕ್ರಿಯಾಸಿದ್ಧಿಗೆ ಸಾಧಕವಾಗುವಂತೆ ಮಾಡುವ ಕ್ರಿಯೆಯೇ ಪ್ರಾಣಾಯಾಮ. ಪ್ರಣವ, ವ್ಯಾಹೃತಿ, ಗಾಯತ್ರಿ ಮಂತ್ರಗಳಿಂದ ಈ ಕ್ರಿಯೆಯು ಸಕಲ ಶಕ್ತಿದಾಯಕ.

ಭಗವಂತನ ಸೃಷ್ಟಿಯ ಗಿರಿ, ನದಿ ಮೊದಲಾದ ಪವಿತ್ರ ವಸ್ತುಗಳನ್ನು ಧ್ಯಾನಿಸಿ, ದಿನ, ಪಕ್ಷ, ಮಾಸ ಸಂವತ್ಸರಾದಿ ತತ್ಕಾಲೀನ ಸೂಚಕಗಳನ್ನು ನೆನಪಿಸಿಕೊಂಡು, ಹೃತ್ಕಮಲ ಮಧ್ಯ ನಿವಾಸಿಯಾದ ಪರಮಾತ್ಮನ ಪ್ರೇರಣೆಯಿಂದ ಹಾಗೂ ಅವನ ಪ್ರೀತ್ಯರ್ಥವಾಗಿ ಕಾರ್ಯಾಚರಣೆಗೆ ಧೃಡ ಸಂಕಲ್ಪವೇ ಸಂಧ್ಯಾವಂದನೆಯ ಇನ್ನೊಂದು ಬಹುಮುಖ್ಯ

ಅಂಗ. ಈ ಕಾರ್ಯವು ಪ್ರಕೃತಿಯಲ್ಲಿ ತನ್ನ ಸ್ಥಾನ, ಇತಿ, ಮಿತಿ, ನಿಯಾಮಕ ಶಕ್ತಿ, ಪರಿಪಾಲಿಸಬೇಕಾದ ಕರ್ತವ್ಯ ಇತ್ಯಾದಿಗಳ ತಾತ್ವಿಕ ಸಂದೇಶವಾಗಿದೆ

ಮಂತ್ರೋಕ್ತ ಮಾರ್ಜನ, ಜಲಾಭಿಮಂತ್ರಣಗಳು ತನ್ನಲ್ಲಿರುವ ಪವಿತ್ರಾಪವಿತ್ರ ಅಂಶಗಳನ್ನು ನೆನಪಿಸಿ, ಮಾಡಿರುವ ಪಾಪ-ಪುಣ್ಯಗಳನ್ನು ಮನವರಿಕೆ ಮಾಡಿಸಿ, ಅವುಗಳಿಗಾಗಿ ಪಶ್ಚಾತ್ತಾಪ ಮತ್ತು ಪರಿಹಾರಗಳನ್ನು ಸೂಚಿಸುತ್ತದೆ.

ಸೂರ್ಯಾರ್ಘ್ಯ ಸಂಧ್ಯಾವಂದನೆಯ ಅತ್ಯಂತ ಪ್ರಮುಖ ಭಾಗ ಸಂಧ್ಯಾಕಾಲದಲ್ಲಿ ಜ್ಞಾನ ಸೂರ್ಯನನ್ನು ಎದುರಿಸುವ ಆಸುರೀ ಹಾಗೂ ತಾಮಸಿಕ ಶಕ್ತಿಗಳನ್ನು ನಿವಾರಿಸುವ ತತ್ವವೇ ಸೂರ್ಯಾರ್ಘ್ಯ ಗಾಯತ್ರಿಯಂತಹ ಮಹಾಮಹಿಮಾನ್ವಿತ ಮಂತ್ರದ ಬಲದಿಂದ ಈ ದೈತ್ಯ ಶಕ್ತಿಗಳನ್ನು ಸಂಹರಿಸುವ ಅನುಸಂಧಾನದಿಂದ, ಕರ್ತವ್ಯ ಭಾವದಿಂದ ನೀಡುವ ಅರ್ಘ್ಯವು ವೈದಿಕ ಶಕ್ತಿಯ ಪ್ರತೀಕ

ಗಾಯತ್ರಿ ಧ್ಯಾನ, ಜಪ, ತರ್ಪಣ ಇನ್ನೊಂದು ಪ್ರಮುಖ ಅಂಗ ಪ್ರತಿಯೊಂದು ಕ್ರಿಯಾಸಿದ್ಧಿಗೆ ಅಗತ್ಯವಾದ ಶಕ್ತಿಯು ತನ್ನ ಅಂತರಂಗದಲ್ಲಿ ಅಡಗಿದೆ ಬತ್ತಿ, ಎಣ್ಣೆ, ದೀಪಗಳನ್ನು ಬೆಂಕಿಯಿಂದ ಬೆಳಗಿಸುವಂತೆ ತನ್ನ ದೇಹದಲ್ಲಿ ಇರುವ ಮನಸ್ಸು ,ಚಿತ್ತ , ಬುದ್ಧಿಗಳನ್ನು ಪ್ರಚೋದಿಸಿ ಚೈತನ್ಯಶೀಲವಾಗಿ ಮಾಡುವಂತೆ ಸಕಲ ಶಕ್ತಿಗಳ ಮೂಲವಾದ ಸವಿತೃ ದೇವತೆಯನ್ನು ಧ್ಯಾನಿಸಿ, ಪ್ರಾರ್ಥಿಸಿ, ತೃಪ್ತಿಪಡಿಸುವ ಪವಿತ್ರ ಪ್ರಕ್ರಿಯೆಯೇ ಗಾಯತ್ರಿ ಧ್ಯಾನ, ಜಪ, ತರ್ಪಣ. ಅಂತೆಯೇ ತನ್ನ ಆರಾಧ್ಯ ದೈವದ ಮೂಲಮಂತ್ರಗಳನ್ನು ಜಪಿಸಿ ನೀಡುವ ತರ್ಪಣ ಬದಲಾವಣೆಯ ಸಮಯದಲ್ಲಿ ತಾನು ನೆಚ್ಚಿಕೊಂಡಿರುವ ದೈವೀ ಶಕ್ತಿಯನ್ನು ಕ್ರೋಢೀಕರಿಸುವ ಸಂಕೇತ.

ಇಂದ್ರಾದಿ ದಿಕ್ಪಾಲಕರುಗಳನ್ನು ವೇದೋಕ್ತ ಮಂತ್ರದಿಂದ ನಮಸ್ಕರಿಸಿ ಎಲ್ಲಾ ದಿಕ್ಕುಗಳಿಂದ ಬರುವ ಅಡ್ಡಿ ಆತಂಕಗಳನ್ನು ದೂರಮಾಡುವ ಪ್ರತಿಬಂಧಕದ ಸೂಚಕವೇ ದಿಜ್ಞಮಸ್ಕಾರ.

'ಆಕಾಶಾತ್ಪತಿತಂ ತೋಯಂ ಯಥಾಗಚ್ಛತಿ ಸಾಗರಂ' ಎಂಬ ಮಂತ್ರೋಚ್ಚಾರಣ ಪೂರ್ವಕವಾಗಿ ಗೋತ್ರಪ್ರವರಗಳಿಂದ ಕೂಡಿದ ಅಭಿವಾದನ ತನ್ನನ್ನು ಪ್ರಕೃತಿ ಮತ್ತು ಅದರ ನಿಯಾಮಕನೊಡನೆ ತದೇಕ ತನ್ಮಯಭಾವ ತಾಳುವ ಸಂಕೇತ

ಸ್ನಾನಾದಿ ಸಾಂಗೋಪಾಂಗವಾಗಿ ಸಂಧ್ಯಾವಂದನೆಯನ್ನು ಪೂರೈಸಿದ ಬಳಿಕ ಕ್ರಿಯಾ ಲೋಪಗಳನ್ನು ಸ್ಮರಿಸಿ ಕ್ಷಮಾಪಣೆಯನ್ನು ಯಾಚಿಸಿ, ಮಾಡಿರುವ ಕರ್ಮಫಲವೆಲ್ಲವನ್ನೂ ಜಗನ್ನಿಯಾಮಕ ಶಕ್ತಿಗೆ ಸಮರ್ಪಿಸಿ, ಸನ್ನಿವೇಶವನ್ನು ಸಮಚಿತ್ತದಿಂದ, ನಿರ್ಭೀತಿಯಿಂದ, ಶಾಂತರೀತಿಯಿಂದ ಎದುರಿಸುವ ಸಿದ್ಧತೆಯೇ ಬ್ರಹ್ಮಾರ್ಪಣ ಅಥವಾ ಕೃಷ್ಣಾರ್ಪಣ ಕ್ರಿಯೆ ತನ್ನ ಕರ್ತವ್ಯವನ್ನು ತನ್ನ ವಿವೇಚನೆಯಿಂದ, ದೃಢಚಿತ್ತದಿಂದ ಪೂರೈಸಿ ಕೃತಕೃತ್ಯತೆಯನ್ನು ಸಾಧಿಸುವುದೇ ಸಂಧ್ಯಾವಂದನೆಯ ಪವಿತ್ರ ಉದ್ದೇಶ ತಾತ್ವಿಕ ಮಹತ್ವ, ಸರ್ವಕಾಲಿಕ ಸತ್ಯ, ನಿತ್ಯ ಕರ್ತವ್ಯ. ಲೌಕಿಕ ಮತ್ತು ಪಾರಮಾರ್ಥಿಕ ತತ್ವಾರ್ಥಗಳನ್ನು ಹೊಂದಿರುವ ಸಂಧ್ಯಾವಂದನೆಯು ಪ್ರತಿಯೊಬ್ಬ ಜೀವಿಯು ಬದಲಾಗುತ್ತಿರುವ ಸನ್ನಿವೇಶವನ್ನು ಎದುರಿಸುವ ಸದಾ ಸಿದ್ಧತೆಯ ಸಂಕೇತ.





# ಸಮರ್ಥ ಸಂದೇಶವಾಹಕ ಕಾರ್ಯಸಾಧಕ ಆಂಜನೇಯ

**ಮಾ**ನವ ಶರೀರದ ಹೃತ್ಕಮಲವೇ ಪರಮಾತ್ಮನ ಶಾಶ್ವತ ಆವಾಸಸ್ಥಾನ. ಪಂಚಪ್ರಾಣದ ಮೂಲಕ ಶರೀರಕ್ಕೆ ಚೇತನದಾತನೇ ಮುಖ್ಯಪ್ರಾಣಸ್ವರೂಪೀ ವಾಯುದೇವ. ವಾಯುದೇವನ ಸುತನೇ ಅಂಜನಾಸೂನು ಆಂಜನೇಯ. ಪರಮಾತ್ಮನ ಆಜ್ಞಾಧಾರಕ, ಭಗವತ್ಕಾರ್ಯ ಸಾಧಕ, ಸಮರ್ಥ ಸಂದೇಶವಾಹಕ.

ಪರಮಪಾವನ, ಮರ್ಯಾದಾ ಪುರುಷ ಶ್ರೀರಾಮನ ಅನುಪಮ ದೂತನಾಗಿ ಪುಣ್ಯಚರಿತನಾದ ಆಂಜನೇಯನನ್ನು ವರ್ಣಿಸುವ ಶ್ಲೋಕ ಇಂತಿದೆ 'ಮನೋಜವಂ, **ಮಾರುತ ತುಲ್ಯ ವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ । ವಾತಾತ್ಮಜಂ ವಾನರಯೂಥ ಮುಖ್ಯಂ ಶ್ರೀರಾಮದೂತಂ ಶಿರಸಾ ನಮಾಮಿ॥'** ಸಮರ್ಥ ಸಂದೇಶವಾಹಕ ಮತ್ತು ಕಾರ್ಯಸಾಧಕನಿಗೆ ಇರಬೇಕಾದ ಗುಣಲಕ್ಷಣಗಳೇ ಮೇಲಿನ ಶ್ಲೋಕದ ವರ್ಣನೆ ಮನಸ್ಸಿಗನುಗುಣವಾಗಿ ಇಚ್ಛಾಶಕ್ತಿಗೆ ಪೂರಕವಾಗಿ ತ್ವರಿತವಾದ ಚಲನಶೀಲತೆಯೇ ಪ್ರಮುಖವಾಗಿರಬೇಕಾದ ಗುಣ. ಸಕಲ ಜೀವಿಗಳಿಗೂ ಜೀವಂತಿಕೆಯನ್ನುಂಟುಮಾಡುವ ಪ್ರಾಣವಾಯುವಿನ ಚಲನೆಯಂತೆ ಸಂದೇಶವಾಹಕನು ಅನುಕೂಲಕರ ವೇಗವನ್ನು ಹೊಂದಿರಬೇಕು. ಕಾರ್ಯಸಾಧನೆಯ ತಪಸ್ಸಿನಲ್ಲಿ ಇಂದ್ರಿಯಗಳ ಸೆಳೆತಕ್ಕೆ ಮನಸೋತು ಕರ್ತವ್ಯಚ್ಯುತರಾಗುವುದು ಸ್ವಾಭಾವಿಕ ಇದಕ್ಕೆ ಇಂದ್ರಿಯಗಳನ್ನು ಜಯಿಸುವ ಸಾಮರ್ಥ್ಯ ಮತ್ತು ಕ್ಷಮತೆ ಅನಿವಾರ್ಯ. ಮನಸ್ಸು ಇಂದ್ರಿಯಗಳಿಗೆ ಮತ್ತು ಭಾವೋದ್ರೇಕಗಳಿಗೆ ವಶವರ್ತಿಯಾಗದೆ ತನ್ನ ಬುದ್ಧಿಯನ್ನು ವಿವೇಕ ವೈಚಾರಿಕತೆಗಳಿಗೆ ಗುರಿಪಡಿಸುವುದರ ಮೂಲಕ ಯುಕ್ತಾ ಯುಕ್ತ ವಿವೇಚನೆ ಕಾರ್ಯಸಾಧಕನಿಗೆ ಅತ್ಯವಶ್ಯಕ. ಈ ಗುಣವುಳ್ಳ ಆಂಜನೇಯನು ವರಿಷ್ಠ ಅಂದರೆ ಹಿರಿಯ ಗುಣಗಳ ಹಾಗೂ ಅನುಭವಗಳ ಆಕರ ಇವನು ವ್ಯಾಕರಣ ಶಾಸ್ತ್ರವಿಶಾರದ, ಭಾಷಾ ಪ್ರಭು, ಸಂವಹನ ಚತುರ.

ಮಾರುತಿಯು ಪ್ರಾಣಧಾರಕ ವಾಯು ಮತ್ತು ಸೂಕ್ಷ್ಮಾವಲೋಕನದ ಪ್ರತೀಕವಾದ ಅಂಜನಾದೇವಿಯರ ಆತ್ಮಜ. ಅಂದರೆ ಚೇತನ ಮತ್ತು ಜಾಗೃತಿ ಇವುಗಳ ಸಂಗಮದ ಫಲಿತಾಂಶವೇ ಆಂಜನೇಯ. ಪ್ರಕೃತಿ ಸಹಜ ಸ್ವಭಾವ, ಸಾಮರ್ಥ್ಯ, ಚಪಲತೆ, ವಿಕ್ಷೇಪಗಳ ಮೂರ್ತಿಸ್ವರೂಪವೇ ವಾನರರು. ಇವರು ಪ್ರಕೃತಿಯಿಂದ ಪೋಷಿತರಾದವರು. ಕೃತಕತೆಯ ಸೋಂಕಿಗೆ ಒಳಗಾಗದವರು. ಇಂತಹ ಪ್ರಕೃತಿದತ್ತ ಸಂಪನ್ಮೂಲಗಳ ನಾಯಕನೇ ಆಂಜನೇಯ. ಇವುಗಳ ಸದುಪಯೋಗದಿಂದ ಭಗವಂತನ ಇಚ್ಛೆಯನ್ನು ಪೂರೈಸುವ ಮಹಾಸೇನಾನಿಯೇ ಹನುಮಂತ. ಇಷ್ಟೆಲ್ಲಾ ಶ್ರೇಷ್ಠ ಗುಣಗಳಿಂದ ಕೂಡಿದರೂ ತಾನು ರಾಮನ ದೂತ ಮಾತ್ರ, ಕಾರ್ಯಸಾಧನೆಯ ನಿಮಿತ್ತ ಮಾತ್ರ ಎಂಬ ವಿನೀತ ಭಾವದಿಂದ ಪೂತ (ಪರಿಶುದ್ಧ) ನಾದವನು ಆಂಜನೇಯ. ತನ್ನ ಹೃದಯದಲ್ಲಿ ಶ್ರೀರಾಮನನ್ನು ಪ್ರತಿಷ್ಠಾಪಿಸಿ, ಅನವರತ, ಅನೂಚಾನವಾಗಿ, ಅವ್ಯಾಹತವಾಗಿ ಆರಾಧಿಸುವವನೇ ಆಂಜನೇಯ ಇವನ ಸ್ಮರಣೆಯಿಂದ ಬುದ್ಧಿ, ಬಲ, ಯಶಸ್ಸು, ಧೈರ್ಯ, ನಿರ್ಭಯತ್ವ , ಆರೋಗ್ಯ, ಚುರುಕುತನ, ವಾಕ್ಪಟುತ್ವಗಳು ಸಿದ್ಧಿಸುತ್ತವೆ ಎನ್ನುತ್ತದೆ ಇನ್ನೊಂದು ಶ್ಲೋಕ ಅಂದರೆ ಈ ಗುಣಗಳಿಂದ ಪರಿಪೂರ್ಣನಾದ ಆಂಜನೇಯನನ್ನು ಧ್ಯಾನಿಸಿ ಕಾರ್ಯಸಾಧನೆಗಾಗಿ ಸದಾ ಸ್ಮರಿಸುತ್ತಿರಬೇಕು ಮತ್ತು ಆ ಸದ್ಗುಣಗಳನ್ನು ತಾನು ಬೆಳೆಸಿಕೊಂಡಾಗ ಮಾತ್ರ ಕಾರ್ಯಸಾಧನೆ ಸಾಧ್ಯ ಎಂಬುದನ್ನು ಇದು ಸೂಚಿಸುತ್ತದೆ.

ಆಂಜನೇಯನ ಕಾರ್ಯಕ್ಷಮತೆಯನ್ನು ಮತ್ತು ಸಂದೇಶವಾಹಕ ಸಾಮರ್ಥ್ಯವನ್ನು ವಿಶದೀಕರಿಸುವ ಹಲವಾರು ನಿದರ್ಶನಗಳಿವೆ. ಮೊದಲನೆಯದಾಗಿ ಸುಗ್ರೀವನ ಸ್ನೇಹಸಂದೇಶವನ್ನು ಶ್ರೀರಾಮನಿಗೆ ಅತ್ಯಂತ ಫಲಪ್ರದವಾಗಿ ಮುಟ್ಟಿಸಿ ರಾಮಸುಗ್ರೀವರ ಶಾಶ್ವತ ಸಖ್ಯಕ್ಕೆ ಕಾರಣೀಭೂತನಾಗುತ್ತಾನೆ ಅನಂತರ ಸೀತಾನ್ವೇಷಣೆಯನ್ನು ಯಶಸ್ವಿಯಾಗಿ ನಿರ್ವಹಿಸಿ ಸೀತಾಮಾತೆಗೆ ಶ್ರೀರಾಮನ ಉಂಗುರವನ್ನಿತ್ತು ಶ್ರೀರಾಮನಿಗೆ ಸೀತೆಯ ಚೂಡಾಮಣಿಯನ್ನು ತಲಪಿಸಿ ಪರಮಾತ್ಮನ ಪ್ರೀತಿಗೆ ಪಾತ್ರನಾಗಿ ಕೃತಕೃತ್ಯನಾಗುತ್ತಾನೆ. ತನ್ನ ಸಾಮರ್ಥ್ಯದ ಅರಿವನ್ನು ಶತ್ರುಗಳಿಗೆ ಉಂಟುಮಾಡಲು ಲಂಕೆಯ ಆಸುರೀಸಂಪತ್ತನ್ನು ಧ್ವಂಸಮಾಡುತ್ತಾನೆ.

ಶ್ರೀರಾಮನ ಹೆಸರಲ್ಲಿ ರಾಜ್ಯಭಾರ ಮಾಡುತ್ತಿದ್ದ ಭರತನು ನಿಗದಿತ ಸಮಯದೊಳಗೆ ಶ್ರೀರಾಮನು ಹಿಂದಿರುಗದಿದ್ದಾಗ, ಪ್ರಾಯೋಪವೇಶವನ್ನು ಕೈಗೊಳ್ಳಲು ಸಿದ್ಧನಾದಾಗ

ವಿಜಯೀ ರಾಮನ ಆಗಮನವನ್ನು ತಿಳಿಸಿ ಸಂಭಾವ್ಯ ಅನಾಹುತವನ್ನು ತಡೆಹಿಡಿಯುತ್ತಾನೆ ಇವುಗಳು ಆಂಜನೇಯನ ಸಂದೇಶವಾಹಕ ಸಾಮರ್ಥ್ಯಕ್ಕೆ ಕೆಲವು ಉದಾಹರಣೆಗಳು ಲಕ್ಷ್ಮಣನು ಮೂರ್ಛಿತನಾಗಿ ಬಿದ್ದು ಚೇತರಿಕೆ ಅಸಂಭವವಾದಾಗ ಪುನಶ್ಚೇತನಕ್ಕೆ ಅವಶ್ಯವಾದ ಸಂಜೀವಿನಿಯನ್ನು ಸಕಾಲಕ್ಕೆ ತಂದೊದಗಿಸಿದ ಒಂದೇ ಒಂದು ದೃಷ್ಟಾಂತ ಸಾಕು ಆಂಜನೇಯನ ಕಾರ್ಯ ಸಾಮರ್ಥ್ಯ ಊಹಿಸಲು ರಾಮರಾವಣರ ಯುದ್ಧದಲ್ಲಿ ಆಂಜನೇಯನು ತೋರಿಸಿದ ಧೈರ್ಯ, ಸಾಹಸ, ಶೌರ್ಯಗಳು ಅತ್ಯದ್ಭುತ.

ಅಹಂಕಾರ ಮಿತಿಮೀರಿದವರ ಸೊಕ್ಕನ್ನಡಗಿಸುವಲ್ಲಿ ಇವನ ಜಾಣ್ಮೆಯು ಸೌಗಂಧಿಕ ಹರಣ, ಶರಸೇತು ಬಂಧನಗಳ ಸಂದರ್ಭಗಳಲ್ಲಿ ಸ್ಪಷ್ಟವಾಗಿ ಪ್ರಕಟವಾಗಿದೆ ಆಂಜನೇಯನು ಅಖಂಡ ಬ್ರಹ್ಮಚಾರಿ. ಅದ್ಭುತ ಬಲಶಾಲಿ. ದೇಹದಾರ್ಢ್ಯದ ಮೂರ್ತಿ ಸ್ವರೂಪ. ಸರ್ವಜನಾನುರಾಗಿ. ಇಷ್ಟೆಲ್ಲಾ ಗುಣಗಣಗಳ ನಿಧಿಯಾದರೂ ಆಂಜನೇಯನು ವಿನಯ, ವಿಧೇಯತೆ, ಸರಳತೆ, ಪ್ರಬುದ್ಧತೆ, ಭಗವದ್ಭಕ್ತಿಗಳ ಮಹಾಸಾಗರ. ಈ ಗುಣಗಳ ನಿಧಿಯಾದ ಆಂಜನೇಯನು ಅಜರಾಮರ, ಚಿರಂಜೀವಿ. ಇವನ ಮಹತ್ವವನ್ನರಿತ ತತ್ವನಿಷ್ಠ ಆರಾಧನೆ ದೇಹ ಮನಸ್ಸು ಬುದ್ಧಿಗಳಿಗೆ ದೃಢತೆಯನ್ನು ಮತ್ತು ಸ್ಥಿರತೆಯನ್ನು ಅನುಗ್ರಹಿಸುತ್ತದೆ.





# ತ್ಯಾಗ, ಸ್ನೇಹ, ಎಚ್ಚರಗಳ ಪ್ರತೀಕ ದೀಪಜ್ಯೋತಿ

ದೇವರು ಚರಾಚರ ಪ್ರಪಂಚದಲ್ಲಿ ವ್ಯಾಪ್ತನಾಗಿರುವವನು ಆದರೆ ಅವನ ಸನ್ನಿಧಾನ ವಿಶೇಷ ಕೆಲವು ವಸ್ತುಗಳಲ್ಲಿ ಕೇಂದ್ರೀಕೃತವಾಗಿದೆ ಇಂತಹ ಹನ್ನೊಂದು ವಸ್ತುಗಳನ್ನು ಭಾಗವತ ಮಹಾ ಪುರಾಣವು ಈ ರೀತಿಯಾಗಿ ತಿಳಿಸುತ್ತಿದೆ

**ಸೂರ್ಯಾಗ್ನಿಃ ಬ್ರಾಹ್ಮಣೋ ಗಾವಃ ವೈಷ್ಣವಃ ಖಂ ಮರುತ್ ಜಲಂ**
**ಭೂ ರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿಮೇ ॥**

- *(ಭಾಗವತ 11-11-4)*

ಅಗ್ನಿಯ ಸಾನಂದಕರ ಸಾತ್ವಿಕ ರೂಪವೇ ದೀಪ ದೀಪನ ಕ್ರಿಯೆಗೆ ಮೂರು ವಸ್ತುಗಳು ಅವಶ್ಯಕ. ದಹ್ಯ, ದಹನಾನುಕೂಲಿ ಮತ್ತು ದಹನ ಕಾರಕ ಚೇತನ ದಹ್ಯವಾಗುವ ಬತ್ತಿಯು ತನ್ನ ತ್ಯಾಗದಿಂದ, ದಹನಾನುಕೂಲಿ ಎಣ್ಣೆಯು ತನ್ನ ಸ್ನೇಹ ಗುಣದಿಂದ, ಚೇತನ ಸ್ವರೂಪಿ ಬೆಂಕಿಯು ದಹನ ಕ್ರಿಯೆಯ ಮೂಲಕ ಬೆಳಕೆಂಬ ಚೈತನ್ಯ ರೂಪಿಯಾಗಿ ಕತ್ತಲೆಯನ್ನು ದೂರಮಾಡುವ ಪ್ರಕ್ರಿಯೆಯೇ ದೀಪನ ಕ್ರಿಯೆ. ಎಚ್ಚರಗೊಳಿಸುವ ಸಂಕೇತ ಚರಾಚರ ಕ್ರಿಯೆಗಳಿಗೆ ಸಾಕ್ಷೀಭೂತವಾಗಿ ಸತ್ಯಸಂದೇಶವನ್ನು ಸದಾ ಸಾರುವುದೇ ಪ್ರಜ್ವಲ ನಂದಾದೀಪ.

ದೀಪವು ಪೂಜಾ ಸಾಧನವಾಗಿ ಷೋಡಶೋಪಚಾರಗಳಲ್ಲಿ ಒಂದಾಗಿ ಪರಿಗಣಿಸಲ್ಪಡುತ್ತದೆ. ಆಗ ಜ್ಯೋತಿಯು ಶುಕ್ಲತೇಜದಿಂದ ಕೂಡಿ ದೇವನಾಂ ಸತತ ಪ್ರಿಯವಾಗಿ, ಪ್ರಭಾಕರ ಮಹಾತೇಜದಿಂದ ಕೂಡಿ ಕೋಟಿಸೂರ್ಯಪ್ರಭನಾದ ಪರಮಾತ್ಮನನ್ನು ನೆನಪಿಸುವ ಸಂಕೇತವಾಗುತ್ತದೆ. 'ಜ್ಯೋತಿದಂ ತ್ರೈಲೋಕ್ಯತಿಮಿರಾಪಹಾ ದೀಪಂ ಗೃಹಾಣ ದೇವೇಶ' ಎಂಬ ಭಕ್ತನ ಪ್ರಾರ್ಥನೆಯನ್ನು ಈಡೇರಿಸಿ ಮನಸ್ಸಿನಲ್ಲಿ ಕವಿದಿರುವ ತಮಸ್ಸನ್ನು ನಿವಾರಿಸುವ ಸಾಧನವಾಗುತ್ತದೆ ದೀಪಾರತಿಯು ಸ್ನೇಹಪೂರ್ಣ

ಸಹಾಯದಿಂದ, ತ್ಯಾಗ ರೂಪೀ ಜೀವನವನ್ನು, ಸದಾ ಜಾಗೃತ ಮನಸ್ಸಿನಿಂದ ಪರಮಾತ್ಮ ಪ್ರೀತ್ಯರ್ಥವಾಗಿ ನಡೆಸುವ ಸಂದೇಶವನ್ನು ಭಜಕನಿಗೆ ನೀಡುತ್ತದೆ

ದೀಪವನ್ನೇ ಪೂಜ್ಯವಸ್ತುವಾಗಿ ಪರಿಗಣಿಸಿ ಮಾಡುವ ದೀಪಾರಾಧನೆಯು ಮಾನವನ ದಿನನಿತ್ಯದ ಪೂಜಾವಿಧಿ. ಸಂಧ್ಯಾದೀಪವನ್ನಿಟ್ಟು ಆರಾಧಿಸುವುದು ಭಾರತೀಯ ನಾರಿಯ ನಿತ್ಯವಿಧಿ. ಆಗ ಹೇಳುವ ಮಂತ್ರವು ಈ ರೀತಿ ಇದೆ:

**ಶುಭಂ ಕರೋತಿ ಕಲ್ಯಾಣಂ ಆರೋಗ್ಯಂ ಧನ ಸಂಪದಃ।**
**ಶತ್ರು ಬುದ್ಧಿ ವಿನಾಶಾಯ ದೀಪ ಜ್ಯೋತಿ ನಮೋಸ್ತುತೆ॥**

ಶುಭವನ್ನು ಉಂಟುಮಾಡುವುದು, ಶ್ರೇಯಸ್ಸನ್ನುಂಟುಮಾಡುವುದು, ಆರೋಗ್ಯವನ್ನು ನೀಡುವುದು, ಸಂಪತ್ಕರವಾಗಿರುವುದು, ಶತ್ರುವಿನ ಬುದ್ಧಿಯನ್ನು ಅಥವಾ ಶತ್ರುಸಮನಾದ ದುರ್ಬುದ್ಧಿಯನ್ನು ನಿವಾರಿಸುವುದು ದೀಪಜ್ಯೋತಿಯ ಗುಣಗಳು ದೀಪಜ್ಯೋತಿಯ ಸ್ವರೂಪವನ್ನು ಇನ್ನೊಂದು ಮಂತ್ರದಲ್ಲಿ ಈ ರೀತಿಯಾಗಿ ಹೇಳಲ್ಪಡುತ್ತದೆ.

**ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।**
**ದೀಪೋ ಹರತಿ ಪಾಪಾನಿ ಸಂಧ್ಯಾದೀಪ ನಮೋಸ್ತುತೇ ॥**

ಭಜಕನ ಜಡತೆಯನ್ನು ಭಗವತ್ಪ್ರೇಮವೆಂಬ ಎಣ್ಣೆಯಿಂದ ಜ್ಞಾನಜ್ಯೋತಿಯ ಮೂಲಕ ಉದ್ದೀಪನಗೊಳಿಸುವ ಪರಬ್ರಹ್ಮ ಸ್ವರೂಪವೇ ದೀಪ. ಸರ್ವವ್ಯಾಪಿಯಾಗಿ ಚರಾಚರ ಜಗತ್ತಿನ ಪರಿಪಾಲನಾ ಕಾರ್ಯವನ್ನು ಮಾಡುವ ಜನಾರ್ದನ ರೂಪಿಯೇ ದೀಪ; ಉನ್ನತಿಗೆ ಪ್ರತಿಬಂಧಕವಾದ ಸಕಲ ಪಾಪರಾಶಿಯನ್ನು ಸಂಹರಿಸುವ ಅದ್ಭುತ ಶಕ್ತಿಯೇ ದೀಪ. ಈ ರೀತಿ ಆಧ್ಯಾತ್ಮಿಕ, ಆಧಿ ಭೌತಿಕ, ಆಧಿದೈವಿಕ, ಶಕ್ತಿತ್ರಯವೇ ದೀಪ

ದೀಪಾರಾಧನೆಯ ಇನ್ನೊಂದು ಪ್ರಮುಖ ಪ್ರಕಾರವೇ ಸಪ್ತಶತೀ ದುರ್ಗಾದೀಪ ನಮಸ್ಕಾರ. ಪಂಚವರ್ಣಾಲಂಕೃತ ಭೂಮಂಡಲದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಪಂಚಭೂತಗಳ ಪ್ರತೀಕವಾದ ಪಂಚದೀಪದ ಆರಾಧನೆಯೇ ದುರ್ಗಾ ನಮಸ್ಕಾರ ದೇವಿಪೂಜೆಯ ಪ್ರಮುಖ ವಿಧಾನ ಚಂಡಿಕಾ ಹೋಮದಲ್ಲಿಯೂ ಅಗ್ನಿಸ್ವರೂಪಿಣಿ, ಪರಾಶಕ್ತಿಯ ಪೂಜೆಯೇ ಪ್ರಧಾನ. ಅಲ್ಲಿ ದೇವಿ ಆರಾಧಕನು

**ಭೋ ದೀಪ ದೇವೀ ರೂಪಸ್ತ್ವಂ ಕರ್ಮಸಾಕ್ಷೀ ಹ್ಯವಿಘ್ನಕೃತ್**
**ಯಾವತ್ಕರ್ಮ ಸಮಾಪ್ತಿಃ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ**

ಎಂದು ಕರ್ಮಸಾಕ್ಷಿಯಾದ ದೀಪಸ್ವರೂಪಿಣಿಯಾದ ದೇವಿಯನ್ನು ಪ್ರಾರ್ಥಿಸುತ್ತಾನೆ

ಲೌಕಿಕ ಜೀವನದಲ್ಲಿ ದೀಪವು ವಿದ್ಯುತ್, ತೈಲ ಮೊದಲಾದ ಇಂಧನ ಮಾಧ್ಯಮದ ಮೂಲಕ ಪ್ರಕಾಶಿಸುತ್ತಿದ್ದು ಮಾನವ ಜೀವನದ ಅವಿಭಾಜ್ಯ ಅಂಗವಾಗಿದೆ. ಅಗ್ನಿರೂಪದಲ್ಲಿ ಆಹಾರ ತಯಾರಿಕೆ ಮತ್ತು ಪಚನಕಾರ್ಯದಲ್ಲಿ ದೇಹಕ್ಕೆ ಆಧಾರವೆನಿಸಿ, ದೀಪದ ರೂಪದಲ್ಲಿ ಕಣ್ಣು, ಮನಸ್ಸು, ಬುದ್ಧಿ ಮತ್ತು ವಿವೇಕಗಳನ್ನು ಉದ್ದೀಪನಗೊಳಿಸುವ ಕ್ರಿಯೆ ಸತತವಾಗಿ ನಡೆಯುತ್ತಿದೆ. ಕತ್ತಲೆಯು ಜಡತೆ ಮರೆವುಗಳ ಕಾರಣವಾದರೆ ದೀಪವು ಚೈತನ್ಯ ಜಾಗೃತಿಗಳ ಸಾಧನವಾಗಿದೆ. ಸತ್ಯ ಸ್ಥಿತಿಯನ್ನರುಹುವ ಸಾಕ್ಷೀ ಸ್ವರೂಪವಾಗಿ ದೀಪವು ಜನಜೀವನದ ಅನಿವಾರ್ಯ ಅಂಗವಾಗಿದೆ ಬೆಳಕೇ ಬಾಳು, ಬಾಳೇ ಬೆಳಕು ಎಂಬ ಅವಿನಾಭಾವ ಸಂಬಂಧವೇ ಎಲ್ಲೆಡೆ ಎದ್ದುಕಾಣುವ ವಸ್ತುಸ್ಥಿತಿ. ತ್ಯಾಗ ಸ್ನೇಹ ಎಚ್ಚರಗಳೇ ಬಾಳಿನ ಸಾರ್ಥಕತೆಯ ಸಾಧನಗಳು. ಸತ್ಯಂ ಶಿವಂ ಸುಂದರಂ ರೂಪಿಯಾದ ಪರಮಾತ್ಮನನ್ನರಿಯುವ ವಿಧಾನಗಳು.

★



# ವಿಶ್ವಕಲ್ಪನೆಯ ಪೂಜಾಕಲಶ

ವಿಶ್ವ ರೂಪಿಯಾದ ಪರಮಾತ್ಮನನ್ನು ವಿಶ್ವವ್ಯಾಪಿಯಾಗಿ ಕಲ್ಪಿಸಿ ಪೂಜಿಸುವ ವಿಧಾನವೇ ಕಲಶ ಪೂಜೆ. ಪೂಜಾ ಕಲಶದ ಸ್ಥಾಪನೆ, ಆವಾಹನೆ, ಪ್ರತಿಷ್ಠಾಪನೆ, ಅಲಂಕರಣ, ಇತ್ಯಾದಿಗಳ ಮಂತ್ರೋಕ್ತ ಅನುಸಂಧಾನವನ್ನು ವಿವೇಚಿಸಿದಾಗ ಕಲಶ ರೂಪದಲ್ಲಿರುವ ಪರಮಾತ್ಮನ ವಿಶ್ವವ್ಯಾಪಕತೆಯ ಅದ್ಭುತ ಕಲ್ಪನೆಯ ಅರಿವುಂಟಾಗುತ್ತದೆ. ಕಲಶದಲ್ಲೇ ಪ್ರಧಾನ ದೇವತೆಯನ್ನಾವಾಹಿಸಿ ಪೂಜಿಸುವುದು ಹಲವಾರು ವ್ರತ ವಿಧಾನಗಳಲ್ಲಿ ಕಂಡು ಬಂಗರೆ ಹೋಮ ಹವನಗಳಲ್ಲಿ ಅಗ್ನಿ, ಸ್ವಸ್ತಿಕಗಳ ಜತೆಗೆ ಕಲಶದಲ್ಲಿಯೂ ಪ್ರಧಾನ ದೇವತೆಯನ್ನು ಸಪರಿವಾರ, ಸಾಂಗ, ಸಶಕ್ತಿ, ಸಾಯುಧ ಆವಾಹಿಸಿ ಪೂಜಿಸುವುದು ವೈದಿಕ ವಿಧಾನ.

ಮೊದಲಿಗೆ ಭೂ ಪೂಜೆ. ಆಮೇಲೆ ಧಾನ್ಯ ಪೂಜೆ. ಮಂತ್ರೋಕ್ತವಾಗಿ ಹರಡಿದ ಧಾನ್ಯದಲ್ಲಿ ನಕಲ ಔಷಧೀಯ ಬೀಜ ಗುಣಗಳನ್ನು ಆವಾಹಿಸಲಾಗುತ್ತದೆ. ಜಗತ್ತಿನ ಸಕಲ ಚರಾಚರಗಳ ಬ್ರಹ್ಮಾಂಡದಲ್ಲಿರುವ ಅನಂತ ಆಕಾಶಕಾಯಗಳ ಮತ್ತು ಗ್ರಹ ನಕ್ಷತ್ರಗಳ ಚಲನವಲನಗಳಿಗೆ ಆಧಾರ ಸೂತ್ರವಾದ ಮಹಾಶಕ್ತಿಯನ್ನು ಬುದ್ಧಿಪೂರ್ವಕವಾಗಿ ಅನುಸಂಧಾನ ಮಾಡಿ ಸಮಸ್ತ ಬ್ರಹ್ಮಾಂಡವನ್ನೇ ಕಲಶದಲ್ಲಿ ಪರಿಭಾವಿಸಲಾಗುತ್ತದೆ

ಆನಂತರದ ಕ್ರಿಯೆ ಜಲಪೂರಣ. ಗಂಗೆ, ಯಮುನೆ, ಸರಸ್ವತಿ, ಶುತುದ್ರಿ ಇತ್ಯಾದಿ ಭಾರತ ವರ್ಷದ ಪವಿತ್ರ ನದಿಗಳ ಜಲವನ್ನು ಆವಾಹಿಸಲಾಗುತ್ತದೆ. ಪವಿತ್ರವಾದ ಕೂರ್ಚದಿಂದ ಜಲವನ್ನು ಪಾವನಗೊಳಿಸಿದ ಬಳಿಕ ವಸುಂಧರೆಯಲ್ಲಿರುವ ರತ್ನಗಳನ್ನು ಸೇರಿಸಲಾಗುತ್ತದೆ. ನಿತ್ಯಪುಷ್ಟಿಕರವಾದ ಸರ್ವಭೂತಗಳಿಗೆ ಈಶ್ವರೀಯ ಗುಣಗಳನ್ನೀಯುವ ಗಂಧವನ್ನು ನೀರಿಗೆ ಕಲಸಿ ಅರ್ಚನಾ ರೂಪವಾಗಿ ಅಕ್ಷತೆ ಕಾಳನ್ನು ಹಾಕಿ ದೂರ್ವಾದಿ ಔಷಧೀಯ ಸಸ್ಯಗಳು ಹಾಗೂ ಸುಗಂಧ ಪುಷ್ಪಗಳನ್ನರ್ಪಿಸುತ್ತಾರೆ. ಅಶ್ವತ್ಥಾದಿ ದಿವ್ಯ ಪರ್ಣಗಳನ್ನಿರಿಸಿ, ಅನಂತರ ಅನ್ನ ಸ್ವರೂಪವಾದ ತಂಡುಲ ರಾಶಿಯನ್ನಿರಿಸಿ ಅದರ ಮೇಲೆ ಕಲ್ಪವೃಕ್ಷದ ದಿವ್ಯಫಲವನ್ನು ಪ್ರತಿನಿಧಿಸುವ ನಾಳಿಕೇರ ಫಲ ಇಡಲಾಗುತ್ತದೆ. ಅದರ ಮೇಲಕ್ಕೆ

ಹಿರಣ್ಯ ರೂಪೀ ನಾಣ್ಯ. ಕೊನೆಗೆ ಪವಿತ್ರ ಗ್ರಂಥಿಯಿಂದ ಕೂಡಿದ ಕುಶ ಕೂರ್ಚವನ್ನು ಶಿರದ ಮೇಲಿರಿಸಿದಾಗ ಕಲಶ ಪ್ರತಿಷ್ಠೆ ಕ್ರಿಯೆಯು ಪೂರ್ಣಗೊಳ್ಳುತ್ತದೆ.

ಕಲಶ ಪೂಜೆಯಲ್ಲಿ ಜಲಾಧಿಪತಿಯಾದ ವರುಣ ದೇವನನ್ನು ಆವಾಹಿಸಿದ ಬಳಿಕ **ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ಮೂಲೇ ತತ್ರ ಸ್ಥಿತೋ ಬ್ರಹ್ಮಾ....** ಎಂಬ ಮಂತ್ರದಿಂದ ತ್ರಿಮೂರ್ತಿಗಳನ್ನು ಕಲಶದ ಕುಕ್ಷಿಯಲ್ಲಿ, ಸರ್ವ ಸಾಗರಗಳನ್ನು, ಚತುರ್ವೇದಗಳನ್ನು, ಶಾಂತಿ, ಪುಷ್ಟಿ, ಗಾಯತ್ರಿ, ಸಾವಿತ್ರಿ, ಸರಸ್ವತಿ ಇತ್ಯಾದಿ ಮಾನವ ಬುದ್ಧಿ ಶಕ್ತಿ, ಮೇಧಾ ಶಕ್ತಿ, ದೈಹಿಕ ಶಕ್ತಿ, ಧಾರಣ ಶಕ್ತಿ ಇವೇ ಮೊದಲಾದ ಶಕ್ತಿಗಳ ಅಭಿಮಾನಿ ದೇವತೆಗಳನ್ನಲ್ಲದೆ, ಭಾರತ ವರ್ಷದ ಜನಮನವನ್ನು ಒಂದು ಗೂಡಿಸುವ ಬೆಸುಗೆಯ ಸೂತ್ರವಾದ ಸಪ್ತ ನದಿಗಳನ್ನು ಕಲಶದಲ್ಲಿ ಆವಾಹಿಸಲಾಗುತ್ತದೆ.

ಕಲಶದಲ್ಲಿ ಉದ್ದಿಷ್ಟ ಪ್ರಧಾನ ದೇವತೆಗಳನ್ನು ಸಂದರ್ಭಾನುಸಾರವಾಗಿ ಆವಾಹಿಸಿ ಪ್ರಾಣಪ್ರತಿಷ್ಠಾ ಪುರಸ್ಸರವಾಗಿ, ಪಂಚಭೂತಗಳ ಆಧಾರದಿಂದ ಧ್ರುವ (ಸ್ಥಿರ)ಗೊಳಿಸಲಾಗುವುದು. ಪುಣ್ಯಾಹವಾಚನ ವಿಧಿಯಲ್ಲಿ ಮಂತ್ರೋಕ್ತವಾಗಿ ಮಿಶ್ರ ಮಾಡಿದ ಪಂಚಗವ್ಯದಲ್ಲಿ ವಾಸ್ತೋಷ್ಪತಿಯನ್ನು ಅಂದರೆ ಭೂಮಿಯ ಸಮತೋಲನ, ನೈಸರ್ಗಿಕ ಶಕ್ತಿಗಳ ಸದುಪಯೋಗ, ಪರಿಸರದ ಸಂರಕ್ಷಣೆಗೆ ಕಾರಣವಾದ ವಾಸ್ತು ಪುರುಷನನ್ನು ಆವಾಹಿಸಲಾಗುತ್ತದೆ. ಅಂತೆಯೇ ವಿಧ್ಯುಕ್ತವಾಗಿ ಪ್ರಧಾನ ದೇವತೆಯನ್ನು ಪ್ರತಿಷ್ಠಾಪಿಸಲಾಗುತ್ತದೆ.

ಒಟ್ಟಿನಲ್ಲಿ ಕಲಶವು ಧಾರ್ಮಿಕ ವಿಧಿಯ ಪ್ರಧಾನ ಸಾಧನ ಮಂಗಳದ ಸಂಕೇತ ವಿಶ್ವದ ಸಕಲ ಚರಾಚರ ಪವಿತ್ರ ವಸ್ತುಗಳನ್ನು ಪಂಚಭೂತಗಳನ್ನು, ಪರಿಸರ ಸಂರಕ್ಷಣೆ ಮತ್ತು ಆಯುರಾರೋಗ್ಯ ಕಾರಣವಾದ ವಿಶಿಷ್ಟ ಮೌಲಿಕ ಪದಾರ್ಥಗಳನ್ನು, ಸಸ್ಯಜನ್ಯ ವಸ್ತುಗಳನ್ನು, ಸೃಷ್ಟಿ ಸ್ಥಿತಿ ನಾಶ ಕಾರಣವಾದ ಶಕ್ತಿತ್ರಯಗಳನ್ನು, ಪವಿತ್ರ ರೂಪದಲ್ಲಿ ಅಳವಡಿಸಿಕೊಂಡಿರುವ ವಿರಾಟ್ ಸ್ವರೂಪದ ಮಹಾನ್ ಸಂಕೇತ. ಭೂಮ್ಯಾಕಾಶಗಳ ನಡುವೆ ಇರುವ ಸಕಲ ಶಕ್ತಿಗಳನ್ನು ತನ್ನ ಗರ್ಭದಲ್ಲಿ ಅಡಗಿಸಿ, ಬ್ರಹ್ಮಾಂಡದ ಪರಿಕಲ್ಪನೆಯನ್ನು ಪ್ರತಿನಿಧಿಸುವ ಸರ್ವಾಂತರ್ಯಾಮಿ ವಿಶ್ವರೂಪೀ ಪರಮಾತ್ಮನ ಅದ್ಭುತ ಪ್ರತಿಮೆಯೇ ಪೂಜಾ ಕಲಶ. ಸರ್ವತ್ರ ಪೂಜನೀಯವಾದ ಈ ಕಲಶವು ಭಾರತೀಯ ಸಂಸ್ಕೃತಿಯ ಮಹತ್ತಮ ಪ್ರತೀಕ.





# ನಿಜವನರಿಯುವ ಅಭಿಷೇಕ

**ಷೋ**ಡಶೋಪಚಾರ ಪೂಜೆಯಲ್ಲಿ ಅಭಿಷೇಕವು ತಾತ್ವಿಕವಾಗಿ ಮಹತ್ವ ಪೂರ್ಣವಾದ ಅಂಗ. ತನಗೆ ತಾನು ಮಾಡಿ ಕೊಳ್ಳುವುದು ಸ್ನಾನವಾದರೆ ಎದುರಿಗೆ ಕೂತುಕೊಳ್ಳಿಸಿ ಸ್ನಾನ ಮಾಡಿಸುವ ಪ್ರಕ್ರಿಯೆಯು ಅಭಿಷೇಕವೆನಿಸುವುದು ಪಾವಿತ್ರ್ಯ ಭಾವನೆಯಿಂದ ನೈಜತೆಯ ದರ್ಶನ ಮತ್ತು ಅನುಭವವೇ ಅಭಿಷೇಕದ ಪ್ರಧಾನ ಉದ್ದೇಶ.

ಅಭಿಷೀತ ಪ್ರತಿಮೆ, ಅಭಿಷೇಕ ಸಾಮಗ್ರಿ ಮತ್ತು ಅಭಿಷೇಕ ಇವು ಮೂರು ಅಂಶಗಳನ್ನು ಅಭಿಷೇಕ ಕ್ರಿಯೆಯು ಒಳಗೊಂಡಿದೆ.

ಪರಿಪೂತ, ಪರಿಶುದ್ಧ, ಮಂತ್ರಿತ ಜಲವು ತುಳಸಿ, ಗಂಧ, ಪುಷ್ಪಾದಿಗಳಿಂದ ಸಂಯುಕ್ತವಾಗಿ, ಅಭಿಷೀತ ದೇವರಿಗೆ ಸಂಬಂಧಿಸಿದ ದೇವತೆಗಳನ್ನು ಹಾಗೂ ವರುಣ, ಗಂಗಾದಿ ಸಕಲ ಪವಿತ್ರ ನದಿಗಳನ್ನು ಆಹ್ವಾನಿಸಿ ಸಿದ್ಧಪಡಿಸಿದ ಪವಿತ್ರ ಕಲಶ ಜಲವೇ ಅಭಿಷೇಕಯೋಗ್ಯ ಸಾಮಗ್ರಿ, ಶಂಖಾಗ್ರದಿಂದ ಹರಿಯುವ ಕಲಶೋದಕವೇ ಪವಿತ್ರ ತೀರ್ಥೋದಕವಾಗುವುದು.

ಅಭಿಷೇಕ ಮಾಡುವವನೂ ಸ್ನಾನಾದಿ ಸಂಸ್ಕಾರಗಳಿಂದ ಶುಚಿರ್ಭೂತವಾಗಿ, ಮಂತ್ರೋಚ್ಚಾರಣೆಯಿಂದ ಮತ್ತು ಜಪತಪ ಸಂಧ್ಯಾವಂದನಾದಿ ನಿತ್ಯಕರ್ಮಗಳ ಮೂಲಕ ಪುನೀತನಾಗಿ ಬಾಹ್ಯಾಂತರ ಶುಚಿತ್ವವನ್ನು ಹೊಂದಿ, ಭಕ್ತಿ ಭಾವನೆಯಿಂದ ಮಂದ್ರಸ್ಥಾಯಿಯ ಘಂಟಾನಾದದೊಂದಿಗೆ ಭಕ್ತಿ ಭಾವನೆಯಿಂದ ಅಭಿಷೇಕ ಕ್ರಿಯೆ ನಡೆಸುತ್ತಾನೆ ಈ ಅಮೃತಾಭಿಷೇಕದ ಪ್ರಕ್ರಿಯೆಯ ಅಂತರ್ಗತವಾದ ತತ್ವ ಅತ್ಯಂತ ಮನನೀಯ.

ಇಷ್ಟ ದೈವವನ್ನು ಪ್ರತಿಮೆ, ಸಾಲಿಗ್ರಾಮ ಅಥವಾ ಶಿವಲಿಂಗಗಳಲ್ಲಿ ಧ್ಯಾನಾವಾಹನಾದಿಗಳಿಂದ ಬರಮಾಡಿಸಿ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ,

ನಿರ್ಮಾಲ್ಯವನ್ನು ಅಪಕರ್ಷಿಸಿದ ಬಳಿಕ ಅಭಿಷೇಕ ಪ್ರಾರಂಭ ಗಾಯತ್ರಿ, ವೇದಸೂಕ್ತ, ಪುರುಷ ಸೂಕ್ತ, ಶ್ರೀಸೂಕ್ತ ಮೊದಲಾದ ಅಭಿಷೇಕ ಯೋಗ್ಯ ಸೂಕ್ತಗಳಿಂದ ಪರಮಾತ್ಮನ ಅದ್ಭುತ ಅಂತರ್ಯಾಮಿತ್ವ ಮತ್ತು ವಿಶ್ವವ್ಯಾಪಕತ್ವವನ್ನರಿತು ಅಂತರಂಗದಲ್ಲಿ ಅನನ್ಯ ಅನುಭವದ ಮೂಲಕ ನಿಜವನ್ನರಿಯುವ ತತ್ವವೇ ಅಭಿಷೇಕ

ಶುಚಿತ್ವಕ್ಕೆ ಪ್ರಥಮ ಸ್ಥಾನ. ಮಾನಸಿಕ ಶುಚಿತ್ವ, ಪ್ರತಿಮಾ ಶುಚಿತ್ವ, ದೈಹಿಕ ಶುಚಿತ್ವ ಪರಿಸರ ಶುಚಿತ್ವಗಳಿಗೆ ಅಗ್ರಮಾನ್ಯತೆ. ಉಪಯೋಗಿಸಲ್ಪಡುವ ಪರಿಕರ, ಸಾಮಗ್ರಿ ವಿಧಾನಗಳಲ್ಲಿಯೂ ಸ್ವಚ್ಛತೆಗೆ ಪ್ರಾಧಾನ್ಯ. ನಿಷ್ಕಲ್ಮಶ, ನಿರ್ವ್ಯಾಜ, ಪವಿತ್ರ ಭಾವನೆಗಳಿಂದ ಕೂಡಿ ಮಾಡಿಸುವ ಸ್ನಾನವೇ ಅಭಿಷೇಕ. ಪಾವಿತ್ರ್ಯವು ಮಂತ್ರೋಕ್ತ ಅನುಸಂಧಾನದಿಂದ ಜ್ಞಾನ, ಭಕ್ತಿ, ಪ್ರೀತಿಗಳಿಂದ ಅಭಿವ್ಯಕ್ತವಾಗಿ ಅಭಿಷೇಕಕ್ಕೆ ಮಹತ್ವವನ್ನೀಯುತ್ತದೆ. ತಾಯಿ ಮಗುವಿನ ಸ್ನಾನ ಮಾಡಿಸುವಾಗ ತಾಳುವ ವಾತ್ಸಲ್ಯ ಭಾವ, ಸತಿಯು ಪತಿಗೆ ಸ್ನಾನ ಮಾಡಿಸುವಾಗಿನ ಪ್ರೇಮಭಾವ, ಕಿರಿಯರು ಗುರುಹಿರಿಯರಿಗೆ ಸ್ನಾನ ಮಾಡಿಸುವಾಗಿನ ಪೂಜ್ಯ ಹಾಗೂ ಸೇವಾಭಾವಗಳು ಅಭಿಷೇಕ ಮಾಡುವಾಗ ಆವಿರ್ಭಾವವಾಗುತ್ತವೆ.

ಗಂಗೆ, ವರುಣ ಇತ್ಯಾದಿ ಕಲಶಾಭಿಮಾನಿ ದೇವತೆಗಳನ್ನು ಮತ್ತು ಪ್ರಧಾನ ದೇವತೆಗಳಾದ ಬ್ರಹ್ಮ, ವಿಷ್ಣು ರುದ್ರಾದಿಗಳನ್ನು ಮಂತ್ರ ಪುರಸ್ಸರವಾಗಿ ಕಲಶೋದಕದಲ್ಲಿ ಆವಾಹಿಸಿ ತಯಾರಿಸಿದ ಕಲಶತೀರ್ಥೋದಕವು ಅತ್ಯಂತ ಪವಿತ್ರ ಅಭಿಷೇಕ ಜಲ. ಪಂಚಾಮೃತ ಸ್ನಾನವೂ ಮಧುರ ಭಾವನೆಯಿಂದ ಕೂಡಿದ ಮಜ್ಜನಕ್ರಿಯೆ

ನೈಜ ದರ್ಶನ ಅಭಿಷೇಕದ ಪರಿಣಾಮ ಮತ್ತು ಫಲಿತಾಂಶ. ಇಷ್ಟದೈವದ ಬಗ್ಗೆ ಇರುವ ಅಜ್ಞಾನ, ಭ್ರಮೆ, ಮಿಥ್ಯಾಕಲ್ಪನೆಗಳಿಗೆ ಕಾರಣವಾದ ಅಲಂಕಾರ ಮತ್ತು ಆಚ್ಛಾದನೆಯನ್ನು ತೆಗೆದು ಮೂರ್ತಿಯ ನಿಜ ಆಕಾರ ಮತ್ತು ನಿಜಸ್ವರೂಪವನ್ನು ಸ್ಪರ್ಶ, ದರ್ಶನಗಳ ಮೂಲಕ ಅರಿಯುವ ಪ್ರತ್ಯಕ್ಷ ಅನುಭವವೇ ಅಭಿಷೇಕದ ಜೀವಾಳ.

ಉದಾಹರಣೆಗೆ, ಸ್ನಾನ ಮಾಡುವಾಗ ಮಾತ್ರ ನಮಗೆ ನೈಜರೂಪದ ಉಬ್ಬುತಗ್ಗುಗಳ, ಆಕಾರವಿಕಾರಗಳ ಅರಿವಾಗುತ್ತದೆಯಷ್ಟೆ! ಅಂತೆಯೇ ಹೃದಯದಲ್ಲಿ ಪವಿತ್ರ ಭಾವನೆ ತುಂಬಿರುವಾಗ ದೇವತಾ-ಮೂರ್ತಿಗೆ ಮಂತ್ರಯುಕ್ತವಾಗಿ ಅಭಿಷೇಕ ಮಾಡುತ್ತಿರುವಾಗ ಮಾತ್ರ ಪ್ರತಿಮೆಯ ನೈಜರೂಪ, ರೂಪದ ಹಿಂದಿರುವ ಸಾಂಕೇತಿಕ ಮಹತ್ವಗಳು, ಮಹಿಮೆಗಳು ಅರಿವಾಗಲು ಸಾಧ್ಯ. ತಾಯಿಯು ಮಗುವಿಗೆ ಸ್ನಾನ ಮಾಡಿಸುವಾಗಲೇ ಮಗುವಿನ ನೈಜದೇಹ, ಮುಗ್ಧ ಮನಸ್ಸು , ಸಹಜ ಸೌಂದರ್ಯ, ಲೋಪದೋಷ

(ಗಾಯ, ಊತ, ಇತ್ಯಾದಿ)ಗಳ ಅರಿವಾಗುವುದು ಸಹಜ ತಾನೆ ಅಂತೆಯೇ ಪೂಜಕನಿಗೆ ಇಷ್ಟದೈವದ ಸ್ವರೂಪ, ಗುಣ, ಮಹತ್ವಗಳ ಮನವರಿಕೆಯಾಗಲು ಅಭಿಷೇಕದಿಂದ ಮಾತ್ರ ಸಾಧ್ಯ. 'ಅಭಿಷೇಕ ಪ್ರಿಯೋ ಶಿವ' ಎಂಬ ಸೂಕ್ತಿಯಂತೆ ಅಭಿಷೇಕವು ಶಿವಕರವಾಗಿದೆ. ಜಗತ್ತಿಗೆ ಒಳಿತನ್ನುಂಟುಮಾಡುತ್ತದೆ

ಗುಡಿಗೋಪುರಗಳನ್ನು ನಿರ್ಮಿಸಿ, ಅಲ್ಲಿ ದೇವತಾ ಸಾನ್ನಿಧ್ಯವನ್ನು ದೃಢೀಕರಿಸಲು ಬ್ರಹ್ಮಕಲಶ ಅಭಿಷೇಕ ಸಂಸ್ಕಾರ ನಡೆಸುತ್ತಾರೆ. ಈ ಕಾರ್ಯಕ್ರಮದಲ್ಲಿ ಸಂದರ್ಭಾನುಸಾರವಾಗಿ ಹಲವಾರು ಸಂಖ್ಯೆಯ (25 ರಿಂದ 1000) ಕಲಶಗಳನ್ನು ಪಂಚಾಮೃತ, ಪಂಚಗವ್ಯ ಕ್ವಾಥ, ಮೊದಲಾದ ವಿವಿಧ ದ್ರವ್ಯಗಳಿಂದ ಪೂರಣ ಮಾಡಿ, ಶಾಸ್ತ್ರೋಕ್ತವಾಗಿ ಅಭಿಮಾನಿ ದೇವತೆಗಳನ್ನು ಆವಾಹಿಸಿ, ಪೂಜಿಸಿ, ಅಭಿಷೇಕ ನೆರವೇರಿಸುವ ವಿಧಿ ವಿಧಾನಗಳು ನಡೆಯುತ್ತವೆ. ಇದು ಪ್ರಕೃತಿಯ ವಿವಿಧ ವಸ್ತುಗಳು, ಪರಿಸರವನ್ನು ಕಾಪಾಡುವ ಅಭಿಮಾನಿ ದೇವತೆಗಳು ಮೊದಲಾದವುಗಳ ಮಹತ್ವವನ್ನು ಸಾರುವ ಶಾಸ್ತ್ರೀಯ ವಿಧಾನವಾಗಿದೆ. ಇದರಿಂದಾಗಿ ದೃಢತೆ, ಪಾವಿತ್ರ್ಯ, ದೇವತಾಸಾನ್ನಿಧ್ಯಗಳ ನೆಲೆ ಮೊದಲಾದವುಗಳ ಖಚಿತತೆ ಉಂಟು ಮಾಡಿದಂತಾಗುತ್ತದೆ.

ಒಟ್ಟಿನಲ್ಲಿ, ಅಭಿಷೇಕ ಪ್ರಕ್ರಿಯೆಯು ಒಂದು ಅದ್ಭುತ ಕಲ್ಪನೆಯಾಗಿದ್ದು, ಇಷ್ಟ ದೈವದ ನೈಜಸ್ವರೂಪ ದರ್ಶನ, ಮಾಹಾತ್ಮ್ಯಜ್ಞಾನ, ಭಾವನಾತ್ಮಕ ತಾದಾತ್ಮ್ಯ, ಪರಿಶುದ್ಧತೆ ಮತ್ತು ಪಾವಿತ್ರ್ಯಗಳನ್ನು ಜೀವನದಲ್ಲಿ ಪರಿಣಾಮಕಾರಿಯಾಗಿ ಅಚ್ಚಳಿಯದಂತೆ, ನಿರಂತರವಾಗಿ ಅಳವಡಿಸಿಕೊಳ್ಳಲು ಬಹಳ ಪ್ರಯೋಜನಕಾರಿಯಾಗಿದೆ.





# ಸಂಕರ ಶಕ್ತಿಯ ಸಂಕೇತ ಶನಿದೇವ

ಅನಿಷ್ಟಕ್ಕೆ ಶನ್ಯೈಶ್ಚರ ಗುರಿ ಎಂಬ ನಾಣ್ನುಡಿ ಅರ್ಥಗರ್ಭಿತ, ವಾಸ್ತವಿಕ ಪ್ರತಿಬಿಂಬ ಅನಿಷ್ಟಜನ್ಯ ಸಂಕರ ಸಂತತಿಯ ಮೂಲ, ಸ್ವಭಾವ, ಶಕ್ತಿ, ಪ್ರತಾಪಗಳನ್ನು ವಿಶದೀಕರಿಸಿ ಪ್ರತಿನಿಧಿಸುವ ಸಂಕೇತವೇ ಶನಿದೇವ. ಸಂಕಟನಿವಾರಕನೆಂದೇ ನಂಬಲ್ಪಟ್ಟ ಆರ್ತಭಕ್ತ ಜನಸಮುದಾಯದ ಆರಾಧ್ಯದೈವವೇ ಶನಿಮಹಾತ್ಮ.

ಛಾಯಾಮಾರ್ತಾಂಡ ಸಂಭೂತನಾದ ಶನಿ, ಶನ್ಯೈಶ್ಚರ. ಅಂದರೆ ನಿಧಾನಗತಿಯುಳ್ಳವ, ನೀಲಾಂಜನ ಸದೃಶ, ಯಮಾಗ್ರಜ. ಜ್ಯೇಷ್ಠಾಪತ್ನೀ ಸಮೇತ ಕಾಕವಾಹನ. ಗೃಧ್ರವಾಹನನೂ ಕೂಡಾ. ಬಿಲ್ಲು ಬಾಣಗಳಿಂದ ಸನ್ನದ್ಧನಾದ ಶನಿಯು ಶೂಲಪಾಣಿ. ಕೋದಂಡಾಕೃತಿ ಮಂಡಲದಲ್ಲಿ ಸನ್ನಿಹಿತ ವಿಷಮ ಸ್ಥಿತಿಯಲ್ಲಿದ್ದಾಗ ಚರಾಚರ ವಸ್ತುಗಳಿಗೂ ಸುರಾಸುರರಿಗೂ ಪೀಡಕನಾದ ಶನಿಯು ಅನುಕೂಲನಾದಾಗ ಗೃಹ ಕಳತ್ರವಾಹನೇತ್ಯಾದಿ ಭಾಗ್ಯಗಳನ್ನು ಪ್ರಸಾದಿಸುವ ಅನುಗ್ರಹ ಸಮರ್ಥ. ಭಯ, ತಂದ್ರಿ (ಆಲಸ್ಯ), ಕ್ಷುಧೆ (ಹಸಿವು), ಮೃತ್ಯು, ಜರಾ (ಮುದಿತನ), ಮಾಯಾ, ಮನೋಮಯೀ, ಕಾಮುಕಾ, ವರದಾ ಎಂಬ ನವಶಕ್ತಿಗಳನ್ನು ಹೊಂದಿರುವ ಶನಿಗೆ ಪ್ರಜಾಪತಿ ಮತ್ತು ಯಮ ಅಧಿಪ್ರತ್ಯಧಿ ದೇವತೆಗಳು.

ತಿಲ ಇಷ್ಟ ಧಾನ್ಯ. ಕಪ್ಪು ಅಥವಾ ನೀಲ ಇಷ್ಟ ವರ್ಣ ಇವನು ಪಂಗು ಅಂದರೆ ಕುಂಟುಕಾಲಿನವ ಶನಿಯ ಜನ್ಮರಹಸ್ಯದಲ್ಲಿದೆ ಸಂಕರ ಸಂತತಿಯ ಅಪಾರ ಗಾತ್ರದ ಅಗೋಚರ ಶಕ್ತಿ. ಛಾಯಾ ಅಂದರೆ ನೆರಳು ನೆರಳು ಪ್ರಖರ ಪ್ರಕಾಶಕ್ಕೆ ಅಡ್ಡ ಬರುವ ವಸ್ತುವಿನ ಪರಿಣಾಮ ಪ್ರಖರ ಶಕ್ತಿ ಹಾಗೂ ಅದರ ಪ್ರಸರಣಕ್ಕೆ ಪ್ರತಿಬಂಧಕವಾದ ಮಾಯಾ ಮೋಹಗಳೆಂಬ ಪರದೆಯ ಪರಿಣಾಮದಿಂದ ಜನ್ಯವಾದ ನೆರಳು ಪ್ರಕೃತಿಯ ಸಹಜ ಸ್ಥಿತಿ. ನೆರಳು-ಬೆಳಕು, ಕಪ್ಪು-ಬಿಳುಪು, ದಲಿತ-ಬಲಿತ, ನಿಷ್ಕ್ರಿಯ-ಚೇತನ, ಮೂಢ-ಮೇಧಾವಿ, ಜಡ-ಚೇತನ, ಪ್ರತಿಕೂಲ-ಅನುಕೂಲ, ದಾರಿದ್ರ್ಯ - ಶ್ರೀಮಂತಿಕೆ, ಅನಿಷ್ಟ-ಅದೃಷ್ಟಗಳೇ ಮೊದಲಾದ ಪ್ರತಿಕೂಲ ದ್ವಂದ್ವಗಳು ಪ್ರಕೃತಿಯಲ್ಲಿ ಕಂಡು ಬರುವ ಸಹಜ ಸತ್ಯ.

ಛಾಯಾ-ಮಾರ್ತಾಂಡ ದಂಪತಿಗಳು ಈ ದ್ವಂದ್ವಗಳ ಸಾಂಕೇತಿಕ ರೂಪ. ದ್ವಂದ್ವಗಳು ಬೆರೆತಾಗ ಹುಟ್ಟುವ ಸಂಕರ ಸಂತತಿಯನ್ನು ಪ್ರತಿನಿಧಿಸುವ ಶಕ್ತಿಯೇ ಶನಿ.

ಶನಿ ಪತ್ನಿ ಜ್ಯೇಷ್ಠಾದೇವಿ. ಇವಳ ಆಯುಧ ಮೊರ ಮತ್ತು ಪೊರಕೆ. ನಿರ್ಮಲೀಕರಣ ಸೇವಾಶಕ್ತಿಯ ಪ್ರತೀಕವೇ ಈಕೆ ಶನಿಯ ವಾಹನವಾದ ಕಾಗೆಯೂ ನಿರ್ಮಲೀಕರಣ ಭಾವನೆಯ ಸಂಕೇತ. ಬಣ್ಣದಲ್ಲಿ ಕಪ್ಪಾದರೂ, ಸಹಜಸುಂದರವಾಗಿದ್ದು , ಸಹಕಾರ ಸಹಜೀವನ ಸಹಭೋಜನಗಳೇ ಜೀವಾಳವಾಗಿರುವ ಮನೋ ಭಾವನೆಯ ಸಂಕೇತ. ಇನ್ನೊಂದು ವಾಹನ ಗೃಧ್ರವೂ ಎತ್ತರಕ್ಕೇರುವ, ಕಲ್ಮಶ ನಿವಾರಿಸುವ, ಅನುಪಯುಕ್ತ ನಿರ್ಜೀವ ಜೈವಿಕ ವಸ್ತುಗಳನ್ನು ಸೇವಿಸಿ , ಪ್ರಕೃತಿ ರಕ್ಷಣೆ ಮಾಡುವ ಮನೋಭಾವದ ಪ್ರತೀಕವೇ ಹದ್ದು. ಶನಿಯ ವಾಹನಗಳು ಕೂಡಾ ಪರಿಸರ ಮಾಲಿನ್ಯಕ್ಕೆ ಕಾರಣವಾಗದೇ ನಿರ್ಮಲ ಪರಿಸರವನ್ನು ನಿರ್ಮಿಸುವ ಕಾರ್ಯದಲ್ಲಿರುವ ತತ್ಪರತೆಯನ್ನು ಸೂಚಿಸುತ್ತವೆ.

ಶನಿಯು ಹೆಳವನಾಗಿದ್ದು ಮಂದಗಾಮಿಯಾಗಿದ್ದರೂ ಅಮಿತಶಕ್ತಿಯ ಆಗರ. ಮುನಿದರೆ ಮಾರಕವಾಗಿ ಒಲಿದರೆ ಸಕಲ ಸಂಪತ್ಕರನಾಗುವ ಅಂಗವಿಕಲ ಸಮುದಾಯದ ಪ್ರತೀಕ. ಸುಜ್ಞಾನ - ಅಜ್ಞಾನಗಳ ನಡುವಿನ ಅಂತರವೇ ಅಂಗವಿಕಲ ಜನಾಂಗದ ಸೃಷ್ಟಿಗೆ ಮೂಲಕಾರಣ ಎಂಬ ಸಾರ್ವಕಾಲಿಕ ಸತ್ಯವನ್ನು ಸಾರುವ ಸಂದೇಶಕಾರಕನೇ ಶನೈಶ್ಚರ.

ಬಿಲ್ಲು ಬಾಣಗಳೇ ಶನಿಯ ಆಯುಧ ಗುರಿ ಸಾಧನೆಗೆ ಸಿದ್ಧವಾಗಿರುವ ಶರ, ಸಮರ್ಥ ಶರ ಸಂಧಾನಕ್ಕೆ ಸಾಧನವಾದ ಶರಾಸನ, ಗುರಿ ಸಾಧನೆಯಲ್ಲಿ ಶನಿ ದೇವನಿಗಿರುವ ಸದಾ ಸಿದ್ಧತೆಯ ಸಂಕೇತ.

ಸ್ನೇಹಭರಿತ (ಎಣ್ಣೆಯಿಂದ ತುಂಬಿದ) ಸ್ನಿಗ್ಧ ಎಳ್ಳು ಶನಿಯ ಪ್ರೀತಿಯ ಧಾನ್ಯ. ಇದರಲ್ಲೂ ಶನಿಯ ಸ್ನೇಹಪೂರ್ಣ ಗುಣದ ಒಲವು ವಿಶದವಾಗುತ್ತದೆ. ಪ್ರಕೃತಿ ಸಹಜವಾದ ಬೆಳಕು-ನೆರಳುಗಳಂತಹ ಪ್ರತಿಕೂಲ ದ್ವಂದ್ವ ಶಕ್ತಿಗಳ ಸಾಂಕರ್ಯದಿಂದ ಕೊಳಚೆ ಪ್ರದೇಶದಲ್ಲಿ ಹುಟ್ಟಿ, ಆ ಪರಿಸರದ, ಜೀವನದ ಸಹಜ ಗುಣಗಳನ್ನು ಮೈಗೂಡಿಸಿ ಗೊಂಡು ಸಶಕ್ತನಾಗಿ ಬೆಳೆದು, ನಿರ್ದಿಷ್ಟ ಗುರಿ, ಅದರ ಸಾಧನೆಯನ್ನು ಅಚಲ ಶ್ರದ್ಧೆಯಿಂದ, ನಿರ್ಮಲೀಕರಣವೇ ಪ್ರಧಾನ ಗುರಿಯಾಗಿರಿಸಿ, ಅದಕ್ಕೆ ತಕ್ಕಂತೆ ಇರುವ ಮಡದಿ ವಾಹನಗಳನ್ನು ಹೊಂದಿದ್ದು ತನ್ನ ಶಕ್ತಿ ಸಾಮರ್ಥ್ಯಗಳ ಸ್ಪಷ್ಟ ಅರಿವು ಮೂಡಿಸಿ, ತನ್ನನ್ನೇ ನಂಬಿದವರಿಗೆ ಸಕಲ ಇಷ್ಟಾರ್ಥಗಳನ್ನು ಪೂರೈಸುವ ಶಕ್ತಿಯ ಪ್ರತೀಕವೇ ಶನಿ ಮಹಾದೇವ.



# ವಾಸ್ತವಿಕ ವಿಶ್ವವ್ಯವಸ್ಥೆಯ ಪ್ರತೀಕ ನವಗ್ರಹಗಳು

ನವಗ್ರಹ ಆರಾಧನೆ ಆಸ್ತಿಕರ ಆದ್ಯಕರ್ತವ್ಯವೆನಿಸುತ್ತದೆ. ಯಾವುದೇ ಯಜ್ಞ-ಯಾಗ, ಹೋಮ-ಹವನ ವ್ರತಾಚರಣೆಗಳಲ್ಲಿ ನವಗ್ರಹ ಆರಾಧನೆಯು ಅವಿಭಾಜ್ಯ ಅಂಗವಾಗಿರುತ್ತದೆ. ನವಗ್ರಹರು ಸುಪ್ರೀತರಾದಾಗ ಎಲ್ಲಾ ಕಾರ್ಯಗಳೂ ಸುಗಮವಾಗಿ ನೆರವೇರುವುದೆಂಬ ದೃಢನಂಬಿಕೆಯಿಂದ, ಶ್ರದ್ಧಾಭಕ್ತಿಗಳಿಂದ ನವಗ್ರಹರನ್ನಾರಾಧಿಸುವ ಪರಿಪಾಠ ಅನೂಚಾನವಾಗಿ ಬೆಳೆದು ಬಂದಿದೆ. ನವಗ್ರಹರು ನೀಡುವ ತಾತ್ವಿಕ ಸಂದೇಶ, ಅವುಗಳ ಪ್ರತಿಮಾ ಮಹತ್ವವನ್ನರಿತಾಗ ಮಾತ್ರ ನವಗ್ರಹಾರಾಧನೆಯು ಅರ್ಥಪೂರ್ಣವಾಗಿ ಅನಂತ ಫಲದಾಯಕವಾಗಬಹುದು.

ನವಗ್ರಹ ದೇವತೆಗಳ ಸಾಂಕೇತಿಕ ಮಹತ್ವವನ್ನರಿಯಲು ಅವುಗಳ ಧ್ಯಾನ ಹಾಗೂ ಪ್ರಾರ್ಥನಾ ಶ್ಲೋಕಗಳು, ವೇದೋಕ್ತಸೂಕ್ತಗಳು, ನವಶಕ್ತಿ, ಅಧಿಷ್ಠಾನ ಮಂಡಲಗಳ ರೂಪ, ಸಂಬಂಧಿತ ಸಸ್ಯ ವೈವಿಧ್ಯ, ನಿರ್ದಿಷ್ಟ ಸ್ಥಾನ, ನೋಟ, ಆಯುಧ, ವಾಹನ ಮೊದಲಾದವುಗಳ ಆಳವಾದ ಅಧ್ಯಯನ ಅತ್ಯವಶ್ಯಕ.

**ಅಪ್ರತಿಮ ತೇಜೋಶಕ್ತಿಯ ಪ್ರತೀಕ - ಆದಿತ್ಯ :**

ಗ್ರಹರಾಜ ರವಿಯು ದಿವಾಕರ, ತೇಜೋಮಯ, ಜಗತ್ತಿನ ಕರ್ಮಸಾಕ್ಷಿ, ವರ್ತುಲಾಕಾರ ಮಂಡಲದಲ್ಲಿ ಕೇಂದ್ರಬಿಂದು, ಅರುಣನ ಸಾರಥ್ಯದಿಂದ, ಸಪ್ತಾಶ್ವಗಳಿಂದ ಎಳೆಯಲ್ಪಡುವ ಸುವರ್ಣಮಯ ರಥದಲ್ಲಿ ಸಂಚರಿಸುತ್ತಾ ಮರ್ತ್ಯಾಮರ್ತ್ಯಲೋಕಗಳಲ್ಲಿ ನಡೆಯುವ ವಿದ್ಯಮಾನಗಳಿಗೆ ಸಾಕ್ಷೀಭೂತನಾಗಿ ಮೇರುಗಿರಿಯನ್ನು ಪ್ರದಕ್ಷಿಣೆಗೈಯುತ್ತಿರುವ ಸೂರ್ಯನು ಅರ್ಥಗರ್ಭಿತ ಸಂಕೇತಗಳ ನಿರೂಪಕ.

ತನ್ನ ತೇಜಸ್ಸಿನ ಮೂಲಕ ಜಗತ್ತಿನ ಜೀವರಾಶಿಗೆ 'ದಿನ'ವನ್ನು ಉಂಟುಮಾಡುವ ರವಿಯು ಸೌರಮಂಡಲದ ಕೇಂದ್ರದಲ್ಲಿರುವ ತೇಜೋ ಬಿಂದು. ಪ್ರೇಮ, ಅನುರಾಗ,

ಸೃಷ್ಟಿಗಳಿಗೆ ಸಂಕೇತವಾದ ಅರುಣವರ್ಣನಾದ ಸಾರಥಿಯು ಪದವಿಹೀನ, ಚಲನಹೀನ, ವಿಕಲಾಂಗ. ಪಂಚೇಂದ್ರಿಯ ಮತ್ತು ಮನೋಬುದ್ಧಿಗಳೆಂಬ ಸಪ್ತಾಶ್ವಗಳಿಂದ ಕೂಡಿದ ದೇಹರಥದ ಚೇತನ ಬಿಂದುವಾಗಿ ಉತ್ತುಂಗ ಶಕ್ತಿಯ ಪ್ರತೀಕವಾದ ಮೇರುಗಿರಿಗೆ ಪ್ರದಕ್ಷಿಣೆ ಮಾಡುತ್ತಾ ತನ್ನ ಕರ್ತವ್ಯಶೀಲತೆಗೆ, ಸ್ವಯಂಶಿಸ್ತಿಗೆ, ವಿಕಲಾಂಗರ ಸದುಪಯೋಗಕ್ಕೆ, ಜಗತ್ತಿನ ಜೀವರಾಶಿಯ ಚೇತನಶೀಲತೆಗೆ ಕಾರಣೀಭೂತನಾಗಿ ಆದ್ಯಗ್ರಹನೆನಿಸಿ ಮಹತ್ವ ಪೂರ್ಣನೆನಿಸುತ್ತಾನೆ.

**ಮನೋಶಕ್ತಿಯ ಅಮೃತತತ್ವ ಸಾರುವ - ಸುಧಾಂಶು :**

ಅಮೃತ ತತ್ವಕ್ಕೆ ಪ್ರತಿನಿಧಿಯಾಗಿರುವ ಚಂದ್ರನು ಕಾಲಹೇತುವಾದ ಕ್ಷಯ ವೃದ್ಧಿಗಳ ಪ್ರಭಾವವನ್ನು ಸಾರುತ್ತಾನೆ. ಜೀವನದಲ್ಲಿ ಎದುರಾಗುವ ದ್ವಂದ್ವಗಳನ್ನು ಸಮಚಿತ್ತದಿಂದ ಎದುರಿಸಿ ಅಮೃತ ಚೇತನದ ಸ್ಫೂರ್ತಿಯಿಂದ ನಿರಂತರಜೀವನದ ಸಾರ್ಥಕತೆಯನ್ನು ಸಾಧಿಸುವ ಸೂತ್ರ ಸಾರುತ್ತಾನೆ. ಸೃಜನ ಶೀಲತೆಯ ಸಂಕೇತವೇ ಚಂದ್ರ, ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳನ್ನು ಪ್ರತಿನಿಧಿಸುವ ದಶಾಶ್ವ ರಥ ವಾಹನನಾಗಿ, ಶ್ವೇತವರ್ಣದಿಂದ ಕೂಡಿದ ಚಂದ್ರನು ಮನೋಮಾತೃಕಾರಕನೆನಿಸುತ್ತಾನೆ. ಚತುರಶ್ರ ಮಂಡಲ ಪ್ರಿಯನಾಗಿ ಸದಾ ಶಿಸ್ತಿನ ಚೌಕಟ್ಟಿನಲ್ಲಿ, ಸಂಯಮಶೀಲನಾಗಿ ಎದುರಾಗುವ ಏರಿಳಿತಗಳಿಗೆ ಒಗ್ಗಿ ಮುನ್ನುಗ್ಗುವ 'ಅಮೃತ' ಮತಿ ಸಂಕೇತವೇ ಚಂದ್ರ, ಈ ತಾತ್ವಿಕ ಸುಧೆಯನ್ನು ಪಿತೃಗಳಿಗೆ (ಸೃಷ್ಟಿಕರ್ತರಿಗೆ) ಸುರರಿಗೆ (ಕರ್ತವ್ಯ ಪಾಲಕರಿಗೆ) ಉಣಬಡಿಸಿ ವಿಶ್ವ ವ್ಯವಸ್ಥೆಗೆ ಅಮೃತತ್ವ ವನ್ನೀಯುವವನೇ ಸುಧಾಂಶು ಚಂದ್ರನು

**ಮಣ್ಣಿನಮಗನ ಸಾಕಾರಮೂರ್ತಿ - ಮಂಗಳ :**

ಮಂಗಳನು ಮಣ್ಣಿನ ಮಗ ಮಹೇಶ್ವರನ ಮುಖದಿಂದ ಹರಿದುಬಂದು ಭೂಮಿಗೆ ಬಿದ್ದ ಬೆವರಿನಿಂದ ಹುಟ್ಟಿಬಂದ ಸುಂದರ ಸುಕುಮಾರನೇ ಕುಜ. ಇವನು ರೈತಶಕ್ತಿಯ ಸಂಕೇತ. ಇವನು ಸ್ವಭಾವತಃ ಕೆಂಬಣ್ಣನಾದರೂ ವಾತಾವರಣದ ವೈಪರೀತ್ಯದಿಂದಾಗಿ ಅಂಗಾರಕ (ಕಡು ಕಂದುಬಣ್ಣದವ). ಕುರಿ/ಮೇಕೆ (ಮೇಷ)ಗಳೇ ಇವನ ವಾಹನ. ಕತ್ತಿ, ಈಟಿ, ಗುದಿಗೆ, ಶಕ್ತಿ (ಸ್ನಾಯು)ಗಳೇ ಆಯುಧ. ಇವನು ಭಾರದ್ವಾಜ - ಭಾರವಾಹಕ ಕೂಡಾ. ಪ್ರಕೃತಿ - ಪುರುಷ - ಸೃಷ್ಟಿಗಳೆಂಬ ತ್ರಿಕೋನವೇ ಇವನ ಕಾರ್ಯವ್ಯಾಪ್ತಿಯ ಪ್ರತೀಕ. ಸಂಬಂಧಿತ ವೇದಸೂಕ್ತದ ಪ್ರಕಾರ ಇವನು ಅಗ್ನಿ ಮೂರ್ಧ, ದಿಕ್ಕುಗಳೇ ಭುಜ, ಪೃಥಿವಿಯ ಪತಿ, ಆಪ್ (ನೀರು) ಅವನ ರೇತಸ್ಸು (ಸೃಷ್ಟಿ ಸಾಧನ). ಶಕ್ತಿ, ಶ್ರಮ, ಶ್ರದ್ಧೆ ಸಹಿಷ್ಣುತೆಗಳಿಂದ ಪ್ರಜ್ವಲಿಸುವ ಮುಖದಿಂದ, ಆಕಾಶವನ್ನೇ ಆಧರಿಸುವ

ಭುಜಬಲವುಳ್ಳವನಾಗಿ, ಜಲಶಕ್ತಿಯಿಂದ ಜನಜೀವನವನ್ನು ಸೃಷ್ಟಿಸಿ ಭುವನಜೀವನಾಧಾರನೆನಿಸುವ ಮಂಗಳಕರನೆನಿಸುವ ರೈತನ ಪ್ರತೀಕವೇ ಕುಜಗ್ರಹ

**ಅಗಾಧ ಅರಿವಿನ ಆಗರ - ಬುಧ :**

ವಿಶುದ್ಧ ಬುದ್ಧಿಯ ಬುಧನು ಅನಂತ ಅರಿವಿನ ಆಗರ. ಶಾಸ್ತ್ರಸಂದರ್ಭ ಪರಿಣತ, ಕಾಲೋಚಿತ ವ್ಯವಹಾರ ಜ್ಞಾನದಿಂದ ಸತ್ಯವಾಚ. ಅಮೃತಮತಿ ಚಂದ್ರನ ವಂಶಪ್ರದೀಪ. ಸುವರ್ಚಸನಾಗಿ ಪ್ರಭಾವವನ್ನು ಬೀರಿ, ಜಗತ್ತಿಗೆ ಸ್ವರೂಪವನ್ನು ನೀಡುವವ. ಬುದ್ಧಿವಂತ ಬುಧನು ಗುರಿಸಾಧನೆಯ ಪ್ರತೀಕವಾದ ಬಾಣಾಕಾರ ಪ್ರಿಯ. ಗುರಿಸಾಧನೆಯ ನಿಶಿತಮತಿಯಿಲ್ಲದ ಪರಿಣತನ ನಿಷ್ಪ್ರಯೋಜಕತೆಯನ್ನು ಸೂಚಿಸುವವನು ಪ್ರಿಯಂಗುಕಲಿಕಾ ಶ್ಯಾಮನಾದ ಬುಧನು ಸೃಜನಶೀಲತೆ, ಜೀವನೋತ್ಸಾಹ, ಸ್ಫೂರ್ತಿಯ ಸಂಕೇತ. ಪಾದರಸದಂತೆ ಕ್ಷಿಪ್ರ ಚಲನಶೀಲ.

**ಅಪ್ರತಿಮ ಬುದ್ಧಿಶಕ್ತಿಯ ಮೂರ್ತಿರೂಪ - ಗುರು :**

ದೇವಾಚಾರ್ಯನೆನಿಸುವ ಗುರುವು ಬೃಹಸ್ಪತಿ. ದೊಡ್ಡವರ ಒಡೆಯ ಆಯ್ದ ಉತ್ತಮರಿಗೆ ಮಾತ್ರ ಸಲಹೆಯನ್ನು ನೀಡಿ ಉಪಜೀವಿಸುವ ಸುರಗುರುವು ಅದ್ಭುತ ನ್ಯಾಯಶಾಸ್ತ್ರ ಕೋವಿದ, ವಾಚಸ್ಪತಿ. ಪ್ರಜೆಗಳ ಹಿತವನ್ನು ಕಾಯುವ ಪ್ರಜಾಪತಿಯ ಆತ್ಮಜ (ಉತ್ತರದಾಯಿತ್ವ ಹೊಂದಿದವ) ಸಾಕ್ಷಸೂತ್ರ (ಪ್ರತ್ಯಕ್ಷದರ್ಶನ ವಿಧಾನ)ದ ಮೂಲಕ ಉತ್ತಮರ ಮನೋಬುದ್ಧಿಗಳನ್ನು ಗೆಲ್ಲುವ ಧರ್ಮನಿಷ್ಠ. ಸಾ-ಕ್ಷ (ಅ ದಿಂದ ಕ್ಷ ತನಕ) ಲಿಖಿತ ಸೂತ್ರದ ಅಥವಾ ಗಣನಾ ಶಾಸ್ತ್ರ (ಲೆಕ್ಕಾಚಾರ)ದ ಮೂಲಕ ನ್ಯಾಯ ನಿರ್ಧಾರ ಮಾಡುವ ಧರ್ಮಕೋವಿದ. ಚಚ್ಚೌಕ ಮಂಡಲವನ್ನು (ಚೌಕಟ್ಟನ್ನು) ನ್ಯಾಯೋಚಿತವಾಗಿ ಬದಲಿಸಿ ಆಯತಕಾರವಾಗಿ ಪರಿವರ್ತಿಸುವ ವ್ಯಾವಹಾರಿಕ ನೀತಿಯ ಸಮರ್ಥಕ. ಗುರುವು ಗಂಭೀರ ಚಿಂತಕ. ಮಾರ್ಗ ದರ್ಶಕ, ನ್ಯಾಯನಿಷ್ಠ, ಧರ್ಮವಾದಿ

**ದಂಡ ನೀತಿ ನಿಪುಣ, ಸರ್ವಶಾಸ್ತ್ರಪ್ರವಕ್ತಾರ - ಶುಕ್ರ :**

ಶುಕ್ರನು ಶುಕ್ಲವರ್ಣನಾಗಿ ವಿದ್ಯಾರೂಪ. ಸರ್ವ ಶಾಸ್ತ್ರಗಳ ಪ್ರವಕ್ತಾರ, ಅಸುರ ಮಂತ್ರಿ. ಆಸುರೀ ಶಕ್ತಿಗಳ ದಮನಕ್ಕಾಗಿ ದಂಡನೀತಿ ನಿಪುಣ. ನಯಪ್ರಧಾನನಾಗಿ ವಿನಯೋಪಪನ್ನ. ಯೋಗವಿಶುದ್ಧ ಸತ್ವಶಾಲಿ. ಚಿಂತಿತಾರ್ಥಾನುಕೂಲಕರನಾಗಿ ವರ್ಷ ಪ್ರದ - ಜೀವಜಲದಿಂದ ಸೃಜನ ಶಕ್ತಿಗೆ ಚೇತನದಾಯಕ. ಪಂಚೇಂದ್ರಿಯಗಳ

ಸಮತೋಲನವನ್ನು ಸೂಚಿಸುವ ಪಂಚಕೋನ ಚಿಹ್ನೆಯುಳ್ಳವ. ಪವಿತ್ರತೀರ್ಥವುಳ್ಳ ಕಮಂಡಲ (ಆಕರ)ದಿಂದ, ಅಕ್ಷಸೂತ್ರದ ಆಧಾರದ ಮೇಲೆ ದಂಡ ನೀತಿಯ ಅನುಷ್ಠಾನಕ್ಕೆ ಆಸ್ಪದ ನೀಡಿ ಅಪೇಕ್ಷಿತ ಅನುಕೂಲ ಮಾಡಿಕೊಡುವ ವರದಮೂರ್ತಿ. ಹೇಮಕುಂದ ಮೃಣಾಲದಂತಿದ್ದು ಪಾರದರ್ಶಕನಾಗಿ, ದಂಡ ನೀತಿ ನಿಪುಣನಾದ ಶುಕ್ರನು ಉನ್ನತ ದರ್ಜೆಯ ಕ್ರಿಮಿನಲ್ ಲಾಯರ್ ಅಥವಾ ದಂಡನ್ಯಾಯಾಧೀಶ.

**ಸಂಕರ ಶಕ್ತಿಯ ಸಂಕೇತ - ಶನೈಶ್ಚರ :**

ಛಾಯಾ ಮಾರ್ತಾಂಡ ಸಂಭೂತ ಶನೈಶ್ಚರನು ಸಂಕರ ಶಕ್ತಿಯ ಪ್ರತೀಕ. ವಿಶ್ವದಲ್ಲಿ ಸರ್ವತ್ರ ವ್ಯಾಪಿಸಿರುವ ಕತ್ತಲು-ಬೆಳಕು, ಉಚ್ಚ-ನೀಚ, ಜ್ಞಾನ-ಅಜ್ಞಾನ ಬಲ್ಲಿದ-ಬಡವ, ಮೊದಲಾದ ದ್ವಂದ್ವಗಳ ಸಂಕರದಿಂದ ಮಿಶ್ರತಳಿಯಾಗಿ ಉದ್ಭವನಾದ ಸಂಕರ ಜಾತಿಯ ಪ್ರತಿನಿಧಿಯೇ ಶನಿ. ಅವನು ಪಂಗು (ವಿಕಲಾಂಗ), ನಿಧಾನಗತಿಯವ, ನೀಲಾಂಜನದಂತೆ ನಿಗೂಢತೆಯ ರಾಶಿ, ವಿಷಮ ಪರಿಸ್ಥಿತಿಯಲ್ಲಿ ಆಕ್ರೋಶಕ್ಕೊಳಗಾಗುವ ಕ್ರೋಧನ ತೃಪ್ತನಾದಾಗ ಸುಪ್ರಸನ್ನ ಸಹಜವಾಗಿ ವೃದ್ಧಿಪಡಿಸುವ ಪ್ರಜಾಪತಿ, ಹಾಗೂ ವಿನಾಶಕಾರಕ ಯಮನೇ ಇವನ ಅಧಿಪ್ರತ್ಯಧಿ ದೇವತೆಗಳು ನಿರ್ಮಲೀರಣದ ಪ್ರತೀಕವಾದ ನಿರ್ಜೀವ ಜೀವ ಜಂತುಗಳನ್ನು ನಿವಾರಿಸುವ ಹದ್ದು ಇವನ ವಾಹನ. ಪೊರಕೆ, ಮೊರಗಳೇ ಆಯುಧವಾಗಿದ್ದು ನಿರ್ಮಲೀಕರಣ ಕ್ರಿಯೆಯ ಅಧಿದೇವತೆಯಾಗಿರುವ ಜ್ಯೇಷ್ಠಾದೇವಿ ಸಹಿತನಾಗಿರುವ ಶನಿಯು ನಿರ್ಮಲೀಕರಣದ ಮೂರ್ತರೂಪ. ಕೋದಂಡಾಕೃತಿಯೇ ಇವನ ಇಷ್ಟ ಆಕಾರ. ನಿಶ್ಚಿತ ಗುರಿ ಸೇರಲು ಬಾಣಕ್ಕೆ ಆಧಾರಭೂತವಾದ ಕೋದಂಡವೇ ಇವನ ಅಧಿಷ್ಠಾನ ಮಂಡಲ. ಯಾವುದೇ ಗುರಿಸೇರಲು ಸಂಕರ ಶಕ್ತಿಯ ಸದುಪಯೋಗ ಪಡೆದುಕೊಳ್ಳಬೇಕಾದ ಆವಶ್ಯಕತೆಯ ಸಂದೇಶವೇ ಈ ಶರಾಸನದ ಸಂಕೇತ.

**ಪ್ರಚ್ಛನ್ನ ತಾಮಸ ಶಕ್ತಿಯ ಪ್ರತೀಕ - ರಾಹು :**

ತಮೋಕಾರಕ ರಾಹುವು ಭೀಕರರೂಪನಾಗಿ ಭಯಂಕರ. ಕುಂಡ ಸಂಭವನಾಗಿ ಕೌಂಡಿನೇಯ ಅಂದರೆ ಇಕ್ಕಟ್ಟು, ಬಿಕ್ಕಟ್ಟು, ಆತಂಕ, ಅಡಚಣೆಗಳ ಪ್ರತೀಕ. ಕತ್ತಲನ್ನು ಮಾತ್ರ ಕಾಣಿಸುವ ಅರ್ಧಕಾಯ ಸ್ವರೂಪ. ಚಂದ್ರ (ಶುಭ್ರತೆ) ರವಿ (ಬೆಳಕು) ಗಳನ್ನು ಗ್ರಹಣಗೊಳಿಸುವ (ಆವರಿಸುವ) ತಮೋಮಯ. ರಾಹುವು ಸರ್ಪದಂತೆ ಅಗೋಚರ ಅಪಾಯದ ಸಂಕೇತ. ವಿಶ್ವ ವ್ಯಾಪಾರದಲ್ಲಿ ತಾಮಸ ಗುಣ ಹಾಗೂ ಮೌಢ್ಯಗಳ ಸಂಬಂಧದ ಅಮರತ್ವವನ್ನು ಸೂಚಿಸುವ ಅಮೃತಪಾನ ಮಾಡಿದವನಾಗಿ ಅಜ್ಞಾನ-ತಮೋಗುಣಗಳ ಪ್ರಭಾವದ ನಿತ್ಯಸತ್ಯವನ್ನು ಸಾರುವವನೇ ರಾಹು

**ಧೂಮ್ರಶಕ್ತಿಯ ಪ್ರಭಾವೀ ಗ್ರಹ - ಕೇತು :**

ಧೂಮ್ರವರ್ಣನಾಗಿ, ಧೂಮ್ರ ಸದೃಶನಾದ ಕೇತುವು ಮಬ್ಬು ಮುಸುಕಿಸಿ ಭ್ರಾಂತಗೊಳಿಸುವ ಗುಣವುಳ್ಳವ. ಮಬ್ಬು ಮರೆಮಾಚಿದಾಗ ಇವನ ಜನಕ ಬ್ರಹ್ಮ - (ಬೃಹತ್ - ವಿಶ್ವವ್ಯಾಪಿ) ತತ್ವವನ್ನೇ ಮರೆಗೊಳಿಸುವ ಮೋಡಿಗಾರ ಭ್ರಮೆ, ಭ್ರಾಂತಿ, ಸಂಶಯ, ಮಾಯೆ ಮೊದಲಾದ ಗುಣಗಳ ಪ್ರತೀಕನಾದ ಕೇತುವು ಉನ್ನತ ಮೌಲ್ಯಗಳನ್ನು (ಕೇತು-ಶೃಂಗ-ಶಿಖರ) ಮರೆ ಮಾಚಿ ಮಿಥ್ಯಾ ಮೋಹವನ್ನುಂಟುಮಾಡಿ ಮಾರಕ ಪ್ರಾಯನಾಗುತ್ತಾನೆ. ತತ್ವದ ರಹಸ್ಯವನ್ನರಿತಾಗ 'ವರದಾನ್' ಆಗುವನು. ಇವನು ಬಹುವಾಚಕನು. ಅಸ್ಪಷ್ಟತೆಯಿಂದ ಅನೇಕನೆಂದು ಭಾಸವಾಗುವವನು ವೈವಿಧ್ಯತೆ, ಬಹುತ್ವ, ಭ್ರಾಂತಿ, ಗುರಿಯ ವಿಭಿನ್ನತೆ ಹಾಗೂ ವಿಕೇಂದ್ರೀಕರಣ ಗುಣದಿಂದಾಗಿ ಜೀವಿಗಳನ್ನು ನಿರ್ಬಲ ಹಾಗೂ ನಿರ್ವೀರ್ಯರನ್ನಾಗಿ ಮಾಡುವ ವಿಕೃತ ಶಕ್ತಿಯ ಸಂಕೇತ. ಈ ಶಕ್ತಿಯ ಮೂಲಕ ರವಿ-ಚಂದ್ರರನ್ನು (ಬುದ್ಧಿ-ಮನಸ್ಸು) ಗ್ರಹಣ ಮಾಡುವ ಅತೀವ ಸತ್ವಶಾಲಿ

ನವಗ್ರಹರ ಸ್ಥಾನಮಾನಗಳೂ ವೈಶಿಷ್ಟ್ಯಪೂರ್ಣ. ಭಯಕಾರಕ ರಾಹುವು ಮಧ್ಯಮ ದೇಶದ ಅಧಿಪ. ಕೇತುವು ಬರ್ಬರದೇಶದ ಒಡೆಯ. ಮಣ್ಣಿನ ಮಗ ಮಂಗಳನು ವಿಂಧ್ಯಪ್ರದೇಶದಲ್ಲಿ ನೆಲಸಿರುವವ. ಮನೋಲ್ಲಾಸ ದಾಯಕ ಚಂದ್ರನು ಯಮುನಾ ಪ್ರದೇಶದವ ಅಂತೆಯೇ ಇತರ ಗ್ರಹಗಳೂ ವಿಶಿಷ್ಟ ಪ್ರದೇಶಗಳ ಆಧಿಪತ್ಯ ವಹಿಸುತ್ತಾರೆ.

ನವಗ್ರಹರ ಸಮಿತ್ತುಗಳನ್ನು ಪರಿಶೀಲಿಸಿದಾಗ ಸಹಜ ಜನ್ಯ ಆರೋಗ್ಯದಾಯಕ ಸಸ್ಯ ಸಂಕುಲಗಳ ಗುಣ ಮತ್ತು ಗಾತ್ರಗಳ ಸಮತೋಲನ ಕಂಡುಬರುತ್ತದೆ. ಔದುಂಬರ ಅಶ್ವತ್ಥಗಳಂತಹ ಆಶ್ರಯದಾಯಕ ಬೃಹತ್ ವೃಕ್ಷಗಳು, ದೂರ್ವಾಕುಶಗಳಂತಹ ಹುಲ್ಲು, ಅರ್ಕ ಅಪಾಮಾರ್ಗಗಳಂತಹ ಪೊದೆಗಳು. ಖದಿರ ಶಮಿಗಳಂತಹ ಕಂಟಕ ವೃಕ್ಷಗಳು, ಪಲಾಶದಂತಹ ಯಜ್ಞೋಪಯೋಗಿ ಸಸ್ಯಗಳ ಸಹಜ ಸಮತೋಲನದ ಅರಿವಾಗುವುದು.

ನವಗ್ರಹರಿಗೆ ಪ್ರಿಯವಾದ ನವಧಾನ್ಯಗಳೂ ಅಕ್ಕಿ, ಗೋಧಿ, ತೊಗರಿ, ಹೆಸರು, ಅವರೆ, ಕಡಲೆ, ಎಳ್ಳು, ಉದ್ದು, ಹುರುಳಿಗಳು ಇವುಗಳು ಏಕದಳ, ದ್ವಿದಳ ಹಾಗೂ ಇತರ ಧಾನ್ಯಗಳ ಪೌಷ್ಟಿಕ ಸಮತೋಲನದ ಮೌಲಿಕ ಮಹತ್ವವನ್ನು ಸೂಚಿಸುತ್ತವೆ.

ಮೇಲಿನ ವಿವರಗಳನ್ನು ಪರಾಂಬರಿಸಿದಾಗ ನವಗ್ರಹಗಳು ವಿಶ್ವವ್ಯವಸ್ಥೆಯ ಅಂಗವಾದ ಪ್ರಾಣಿ ಸಂಕುಲ, ಮಾನವ ಜೀವನ, ಸಸ್ಯರಾಶಿ, ಸಹಜ ಸ್ವಭಾವ ಮತ್ತು

ಮನೋಭಾವಗಳನ್ನು ಪ್ರತಿನಿಧಿಸಿ, ಅವುಗಳ ಅನುಕೂಲಕರ ಉಪಯೋಗ ಹಾಗೂ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸುವ ಕ್ಷಮತೆಗಳ ಆವಶ್ಯಕತೆಯನ್ನು ಸಾರುತ್ತವೆ ಮನೋಬುದ್ಧಿ ಚಿತ್ತಗಳ ಸ್ತರದಲ್ಲಿ - ಸೃಷ್ಟಿ- 'ಸ್ಥಿತಿ-ನಾಶ ಪ್ರಕ್ರಿಯೆಯ ವಿಶಿಷ್ಟ ತತ್ವಗಳನ್ನು ಸಾರುತ್ತಿವೆ ಈ ರೀತಿಯಾಗಿ ಸಾಂಕೇತಿಕ ಮಹತ್ವವನ್ನು ಸೂಚಿಸುವ ಉತ್ಕೃಷ್ಟ ಹಾಗೂ ನಿಷ್ಕೃಷ್ಟ ಪರಿಕಲ್ಪನೆಯ ಫಲಿತಾಂಶವೇ ನವಗ್ರಹಾರಾಧನೆ.





# ಕೃತಿಕಾರರ ಪರಿಚಯ

ಆತ್ಮವಿಶ್ವಾಸ, ಹೋರಾಟ ಮತ್ತು ಪರಿಶ್ರಮಗಳಿಂದ ಮನುಷ್ಯನು ಉನ್ನತ ಸಾಧನೆ ಮಾಡಬಹುದೆನ್ನುವುದಕ್ಕೆ ಶ್ರೀ ಹರಿದಾಸ ಮುನ್ನೂರು ಇವರು ಉತ್ತಮ ಉದಾಹರಣೆ ಉದಾತ್ತ ಧ್ಯೇಯದೊಂದಿಗೆ ನಿರಂತರ ದುಡಿಮೆಯಿಂದ ವಿಕಲಾಂಗ ವ್ಯಕ್ತಿಯೂ ಜನಾನುರಾಗ ಮತ್ತು ಜನಮನ್ನಣೆಯನ್ನು ಪಡೆಯಬಹುದೆನ್ನುವುದನ್ನು ಅವರು ಸಾಬೀತುಪಡಿಸಿದ್ದಾರೆ

ದಕ್ಷಿಣಕನ್ನಡ ಜಿಲ್ಲೆಯ ಮುನ್ನೂರು ಗ್ರಾಮದಲ್ಲಿ 1940ರಲ್ಲಿ ಜನಿಸಿದ ಶ್ರೀಯುತರು ಹನ್ನೊಂದನೆಯ ವಯಸ್ಸಿನಲ್ಲಿ ಓಸ್ಟಿಯೋಮೈಲೆಟಿಸ್ ಎಂಬ ಕಾಯಿಲೆಗೆ ತುತ್ತಾದರು ಇದು ಎಂಟು ವರ್ಷಗಳ ಕಾಲ ಹಾಸಿಗೆ ಬಿಟ್ಟೇಳಲಾರದಂತೆ ಮಾಡಿತಲ್ಲದೆ ಶಾಶ್ವತ ಅಂಗವೈಕಲ್ಯವನ್ನು ಉಂಟುಮಾಡಿತು ಈ ಶಯ್ಯಾಗತ ಜೀವನವು ಕಲೆ, ಸಾಹಿತ್ಯ ಹಾಗೂ ಅಧ್ಯಾತ್ಮ ವಿಚಾರಗಳ ಕಡೆಗೆ ಆಸಕ್ತಿ, ಅಭಿರುಚಿ ಮತ್ತು ಅಧ್ಯಯನಗಳಿಗೆ ಮನಸ್ಸನ್ನು ಹದಗೊಳಿಸಿತು ಶ್ರೀಯುತರು 1968ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಸಂಖ್ಯಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದರು 1987ರಲ್ಲಿ ಎ ಐ ಎಂ ಎ ಸಂಸ್ಥೆಯಿಂದ ಮ್ಯಾನೇಜ್‌ಮೆಂಟ್ ಡಿಪ್ಲೊಮಾವನ್ನು ಪಡೆದರು 1998ರಲ್ಲಿ ಇಂಗ್ಲೆಂಡಿನ ಪೋರ್ಟ್ಸ್‌ಮೌತ್ ಯೂನಿವರ್ಸಿಟಿಯಿಂದ ಪ್ರಮಾಣೀಕೃತವಾದ ಐ.ಎಸ್ ಒ ಲೀಡ್ ಅಸೆಸ್ಸರ್ ಆಗಿ ಗುಣ ನಿರ್ವಹಣಾ ವ್ಯವಸ್ಥೆಯ ಪರಿಣತ ಸಲಹೆಗಾರರಾಗಿರುವರು ಸಂಸ್ಕೃತ ಮತ್ತು ಹಿಂದಿ ಭಾಷೆಗಳಲ್ಲಿ ವಿಶಾರದ ಪದವೀಧರರಾದ ಇವರು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲೂ ಪರಿಣತರು ರಷ್ಯನ್ ಭಾಷೆಯನ್ನೂ ಬಲ್ಲವರು ಬಹುಮಾನಿತ ವಾಗ್ಮಿ ಮತ್ತು ಲೇಖಕರು

ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಯೋಜನೆ ಮತ್ತು ಅಭಿವೃದ್ಧಿ ವಿಭಾಗದಲ್ಲಿ 26 ವರ್ಷ ಸೇವೆ ಸಲ್ಲಿಸಿ, ವ್ಯವಸ್ಥಾಪಕ ಹುದ್ದೆಗೇರಿ, 1998ರಲ್ಲಿ ನಿವೃತ್ತರಾದರು ಸದಾ ಪರಹಿತ ಚಿಂತನೆ, ಸುಪ್ತ ಪ್ರತಿಭೆ ಹಾಗೂ ಸಂಪನ್ಮೂಲಗಳ ಸದುಪಯೋಗದಲ್ಲಿ ಆಸಕ್ತಿ ತಳೆದಿರುವ ಶ್ರೀಯುತರು ಬರವಣಿಗೆ, ಅಧ್ಯಯನ, ಕವನ ರಚನೆ, ಸಮಾಜಸೇವೆ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿದ್ದು, ಹತ್ತು ಹಲವು ಸಂಘಟನೆಗಳಲ್ಲಿ ಗೌರವ ಪದಾಧಿಕಾರಿಯಾಗಿ, ಸಕ್ರಿಯ ಸದಸ್ಯರಾಗಿ ಸ್ವಯಂಸ್ಫೂರ್ತಿಯಿಂದ ಸೇವೆ ಸಲ್ಲಿಸುತ್ತಿರುವರು ಶ್ರೀ ಹರಿದಾಸ ಮುನ್ನೂರು ಅವರು ವಿಶಿಷ್ಟ ಪ್ರತಿಭೆಗಳ ಸಂಗಮವಾಗಿದ್ದು ಅವರ ವೈಚಾರಿಕ ಲೇಖನಗಳ ಸಂಚಯವಾದ 'ಅಕ್ಷ ಮಾಲೆ' ಕೃತಿ ಸಾರಸ್ವತ ಲೋಕಕ್ಕೊಂದು ಆದರದ ಅರ್ಪಣೆ